XXX XXX

(c) he without obtaining leave of absence from the Authority, absents from three consecutive meetings of the Authority;

XXX XXX

**8. Powers of the Authority.-** (2) Without prejudice to the generality of sub-section (1) the Authority shall have power,-

(a) to enter into and perform all such contracts as it may consider necessary or expedient for carrying out any of the purposes of this Act subject to such rules as may be prescribed and every contract shall be made on behalf of the Authority by the Secretary: Provided that no contract involving expenditure of rupees five lakhs or more shall be made without the previous sanction of the State Government;

XXX XXX

(b) to borrow any sum required for the purposes of this Act from time to time with the previous sanction of the State Government and subject to such conditions as may be prescribed in this behalf;

XXX XXX

**10. Appointment of Secretary.-** (1) The State Government shall appoint an officer not below the rank of Group-'A' senior scale of Endowment Department to be the Secretary of the Authority.

XXX XXX

(2) The Secretary shall receive such salary and other allowances as the State Government may, from time to time, determine.

XXX XXX

**12. Employees of the Authority.-** (1) Subject to such rules as may be prescribed, the Authority may appoint such number of employees as it may find necessary for effective implementation of the Act:

Provided that, the employees working including Archaks of Sri Malai Mahadeshwaraswamy temple shall be governed by the provisions of Karnataka Hindu Religious Institutions and Charitable Endowments Act, 1997 (Karnataka Act 33 of 2001) and the rules made thereunder.

XXX XXX

**14. Meetings of the Authority.-** (1) Meetings of the Authority shall be convened by the Secretary, with the previous approval of the Chairman at such intervals as the Chairman may deem fit and shall be held at such place, as may be determined by the Chairman:

Provided that the Authority shall meet atleast twice in a calendar year.

(2) Every meeting shall be presided over by the Chairman and if for any reason the Chairman is unable to attend any meeting, the Vice Chairman shall preside over the meeting. The quorum for the meeting shall be one third of the total members including the Chairman.

XXX XXX

**18. Provision with regard to the Movable and Immovable Properties of the Temple.-**

(1) The movable and immovable properties including jewellery of the temple shall be continued to the managed under the provisions of the Karnataka Hindu Religious Institutions and Charitable Endowments Act, 1997 (Karnataka Act 33 of 2001) and the Karnataka Hindu Religious Institutions and Charitable Endowments Rules, 2002.

(2) The Authority shall not interfere in the Administration of Sri Malai Mahadeshwara temple and its subsidiary temples which will continue to be governed by the provisions of the Karnataka Hindu Religious Institutions and Charitable Endowments Act, 1997 (Karnataka Act 33 of 2001) and the Karnataka Hindu Religious Institutions and Charitable Endowments Rules, 2002.

XXX XXX

**19. Preparation of developmental plan, its approval and execution.-** XXX XXX

(2) The development plan prepared under sub-section (1) shall be forwarded by the Secretary to the State Government for its approval. The State Government may approve the plan with or without any modifications.

XXX XXX

**24. Fund of the Authority.-** XXX XXX

(2) There shall be credited to the said Fund,- (i) all grants, subventions, donations and gifts made by the Central Government, State Government, any local authority or any body, whether incorporated or not or any person;

(ii) the amount borrowed by the Authority; and

(iii) all other sums received by or on behalf of the Authority from any source whatsoever:

Provided that the donations, kanike, seva fees and offering made to God in hundi's are exempted from the fund of the Authority.

XXX XXX

**29. Reports.-** (2) The Authority shall before such date, in such form and at such intervals as may be prescribed, submit the prescribed reports to the State Government.

XXX XXX

**38. Power to make regulations.-** The Authority may subject to the provisions of this Act and the rules made under section 37 and with the previous sanction of the State Government, by notification make regulations to carry out the purposes of this Act.

XXX XXX

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೮, ೨೦೧೪ (ಶ್ರಾವಣ ೬, ಶಕ ವರ್ಷ ೧೯೩೬) | ನಂ. ೫೦೫ |
| Part – IV-A | Bangalore, Monday, July 28, 2014 (Shravana 6, Shaka Varsha 1936) | No. 505 |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/51/LA Bill/2014, Bangalore, Dated: 28-7-2014**

The following Bill was introduced in Legislative Assembly on 28-7-2014

## ಕರ್ನಾಟಕ ವಿಧಾನ ಸಭೆ

## ಹದಿನಾಲ್ಕನೇ ವಿಧಾನ ಸಭೆ

## ನಾಲ್ಕನೇ ಅಧಿವೇಶನ

## ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 2014

## (2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 51)

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ 11) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದಲ್ಲಿ,–

(i) ಖಂಡ (a-2-1) ರ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(a-2-1). ಹಿಂದುಳಿದ ವರ್ಗಗಳು ಎಂದರೆ ಸಹಕಾರ ಸಂಘಗಳ ಆಡಳಿತ ಮಂಡಲಿಯಲ್ಲಿ ಮೀಸಲಾತಿ ಉದ್ದೇಶಕ್ಕಾಗಿ ಕಾಲಕಾಲಕ್ಕೆ ಸರ್ಕಾರದಿಂದ "ಎ" ಮತ್ತು "ಬಿ" ಪ್ರವರ್ಗಗಳು ಎಂಬುದಾಗಿ ವರ್ಗೀಕರಿಸಬಹುದಾದ ಮತ್ತು ಅಧಿಸೂಚಿಸಬಹುದಾದ ಅಂಥ ವರ್ಗ ಅಥವಾ ವರ್ಗಗಳ ನಾಗರೀಕರು"

(ii) (ಬಿ–5)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ–5) 'ಸಹಕಾರಿ ಚುನಾವಣಾ ಪ್ರಾಧಿಕಾರ' ಎಂದರೆ, 39ಎಎ ಪ್ರಕರಣದ ಅಡಿಯಲ್ಲಿ ರಚಿಸಿರುವ ಸಹಕಾರಿ ಚುನಾವಣಾ ಪ್ರಾಧಿಕಾರ;"

(iii) (ಇ–1)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಇ–1–ಎ) 'ಪ್ರತಿನಿಧಿ' ಎಂದರೆ, ಇತರ ಸಹಕಾರಿ ಸಂಘಗಳಲ್ಲಿ ಆ ಸಹಕಾರಿ ಸಂಘವನ್ನು ಪ್ರತಿನಿಧಿಸುವ ಮಂಡಳಿಯಿಂದ ನೇಮಿಸಲ್ಪಟ್ಟ ಸಹಕಾರಿ ಸಂಘದ ಮಂಡಳಿಯ ಒಬ್ಬ ಸದಸ್ಯ."

(iv) (ಎಫ್–2)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಫ್–3) 'ನಾಮನಿರ್ದೇಶಿತ' ಎಂದರೆ, ಇತರ ಸಹಕಾರಿ ಸಂಘಗಳಲ್ಲಿ ಆ ಸಹಕಾರಿ ಸಂಘವನ್ನು ಪ್ರತಿನಿಧಿಸುವ ಮಂಡಳಿಯಿಂದ ನೇಮಿಸಲ್ಪಟ್ಟ ಮಂಡಳಿಯ ಸದಸ್ಯ ಅಥವಾ ಸಹಕಾರಿ ಸಂಘದ ಸಿಬ್ಬಂದಿ;"

(v) (ಜಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಜಿ) 'ಪದಾಧಿಕಾರಿ' ಎಂದರೆ, ಚುನಾಯಿತ ಅಧ್ಯಕ್ಷ/ಉಪಾಧ್ಯಕ್ಷ/ ಸಭಾಧ್ಯಕ್ಷ/ ಉಪಸಭಾಧ್ಯಕ್ಷ/ಕಾರ್ಯದರ್ಶಿ ಅಥವಾ ಖಜಾಂಚಿ, ಸಮಾಪಕ, ಆಡಳಿತಾಧಿಕಾರಿ, ವಿಶೇಷಾಧಿಕಾರಿ ಮತ್ತು ಇದು ಸಹಕಾರಿ ಸಂಘದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಯಾವುದೇ ಅಧಿಕಾರವನ್ನು ಚಲಾಯಿಸಲು ಅಥವಾ ಯಾವುದೇ ಪ್ರಕಾರ್ಯವನ್ನು ನೆರವೇರಿಸಲು ಅಧಿಕಾರ ಹೊಂದಿರುವ ಮತ್ತು ಸಂಘದ ವ್ಯವಹಾರಗಳಿಗೆ ಪರಿಣಾಮವನ್ನು ಉಂಟುಮಾಡುವ ಕಾರ್ಯನೀತಿಗಳಿಗೆ ಸಂಬಂಧಿಸಿದಂತೆ ನಿರ್ದೇಶನ ನೀಡುವ ಮಂಡಳಿಯ ಒಬ್ಬ ಸದಸ್ಯನನ್ನು ಒಳಗೊಳ್ಳುತ್ತದೆ."

**3. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದ (4)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5) ರಿಜಿಸ್ಟ್ರಾರನಿಗೆ, ಅಂಥ ಸಂಘದ ಹಿತದೃಷ್ಟಿಯಲ್ಲಿ ಅಥವಾ ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳನ್ನು ಜಾರಿಗೊಳಿಸಲು ಸಂಘದ ಉಪವಿಧಿಗಳ ಯಾವುದೇ ತಿದ್ದುಪಡಿಯು ಅವಶ್ಯ ಅಥವಾ ಅಪೇಕ್ಷಣೀಯವೆಂದು ಕಂಡುಬಂದರೆ, ರಿಜಿಸ್ಟ್ರಾರನು, ಆದೇಶದ ಮೂಲಕ ನಿರ್ದಿಷ್ಟಪಡಿಸಿದ ಸಮಯದೊಳಗೆ ನಿಯಮಿಸಬಹುದಾದ ಅಂಥ ರೀತಿಯಲ್ಲಿ ತಾನು ಪ್ರಸ್ತಾವಿಸಿದ ತಿದ್ದುಪಡಿಯನ್ನು ಮಾಡುವಂತೆ ಆ ಸಹಕಾರ ಸಂಘಕ್ಕೆ ನಿರ್ದೇಶಿಸಬಹುದು.

(6) ಸಹಕಾರ ಸಂಘವು, ಸದರಿ ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ಸಮಯದೊಳಗೆ ಅಂಥ ತಿದ್ದುಪಡಿಯನ್ನು ಮಾಡದಿದ್ದರೆ, ಈ ಅಧಿನಿಯಮದಲ್ಲಿ ಏನೇ ಇದ್ದರೂ, ರಿಜಿಸ್ಟ್ರಾರನು, ಸಹಕಾರ ಸಂಘಕ್ಕೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ತರುವಾಯ ಸದರಿ ತಿದ್ದುಪಡಿಯನ್ನು ನೋಂದಾಯಿಸಬಹುದು ಮತ್ತು ಅದರ ಪ್ರತಿಯನ್ನು ತಾನು ಸಹಿ ಮಾಡಿದ ಒಂದು ಪ್ರಮಾಣಪತ್ರದೊಂದಿಗೆ ಸಹಕಾರ ಸಂಘಕ್ಕೆ ಕಳುಹಿಸಿಕೊಡಬಹುದು ಮತ್ತು ತಿದ್ದುಪಡಿಯು ಯುಕ್ತವಾಗಿ ನೋಂದಾಯಿತವಾಗಿದೆ ಎಂಬುದಕ್ಕೆ ಆ ಪ್ರಮಾಣಪತ್ರವು ನಿರ್ಣಾಯಕ ಸಾಕ್ಷ್ಯವಾಗತಕ್ಕದ್ದು."

**4. 16ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 16ನೇ ಪ್ರಕರಣದ (4)ನೇ ಉಪಪ್ರಕರಣದಲ್ಲಿ "ನಿರಾಕರಿಸಿತ್ತೆಂದು ಭಾವಿಸತಕ್ಕದ್ದು" ಎಂಬ ಪದಗಳಿಗೆ "ಅಂಗೀಕರಿಸಿತ್ತೆಂದು ಭಾವಿಸತಕ್ಕದ್ದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**5. 17ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 17ನೇ ಪ್ರಕರಣದ (1)ನೇ ಉಪಪ್ರಕರಣದ (ಜಿ) ಖಂಡವನ್ನು ಬಿಟ್ಟುಬಿಡತಕ್ಕದ್ದು.

**6. 18ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ (ಡಿ) ಖಂಡದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಯಾವುದೇ ಸಹಕಾರ ಸಂಘದಲ್ಲಿನ, (ಎ) ಖಂಡದ ಅಡಿಯಲ್ಲಿನ ಸಹವರ್ತಿ ಸದಸ್ಯರ ಸಂಖ್ಯೆಯು, ಸಂಘದ ಒಟ್ಟು ಸದಸ್ಯತ್ವದ ಶೇಕಡಾ ಹದಿನೈದರಷ್ಟನ್ನು ಮೀರತಕ್ಕದ್ದಲ್ಲ, ಆದಾಗ್ಯೂ ತಮ್ಮ ಒಟ್ಟು ಸದಸ್ಯತ್ವದ ಸಂಖ್ಯೆಯ ಶೇಕಡಾ ಹದಿನೈದಕ್ಕಿಂತ ಹೆಚ್ಚು ಸಹವರ್ತಿ ಸದಸ್ಯರನ್ನು ಈಗಾಗಲೇ ಹೊಂದಿರುವ ಸಹಕಾರ ಸಂಘಗಳ ಸಂದರ್ಭದಲ್ಲಿ, ಹೆಚ್ಚಿನ ಸಹವರ್ತಿ ಸದಸ್ಯರನ್ನು, 16ನೇ ಪ್ರಕರಣದ ಅಡಿಯಲ್ಲಿ ಆತನು ಅರ್ಹನಾಗಿದ್ದಲ್ಲಿ, ಆತನನ್ನು ಸದಸ್ಯನನ್ನಾಗಿ ಮಾಡತಕ್ಕದ್ದು ಅಥವಾ ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕದಿಂದ ಆರು ತಿಂಗಳೊಳಗೆ ಸಹವರ್ತಿ ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು."

**7. 18ಬಿ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 18ಎ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**18ಬಿ ನಿರ್ದೇಶಕತ್ವದ ಸಮಾಪ್ತಿ.–** ಮತ್ತೊಂದು ಸಹಕಾರ ಸಂಘದ ಪ್ರತಿನಿಧಿಯಾಗಿರುವ ದ್ವಿತೀಯ ಸಹಕಾರ ಸಂಘ ಅಥವಾ ಸಂಯುಕ್ತ ಸಂಘ ಅಥವಾ ಅಪೆಕ್ಸ್ ಸಂಘದ ಒಬ್ಬ ನಿರ್ದೇಶಕನು,–

(i) ಆತನು ಪ್ರತಿನಿಧಿಸುವ ಪ್ರಾಥಮಿಕ ಅಥವಾ ದ್ವಿತೀಯ ಸಹಕಾರ ಸಂಘದ ನಿರ್ದೇಶಕನಾಗಿರುವುದು ನಿಂತುಹೋಗಿದ್ದರೆ; ಅಥವಾ

(ii) ಆತನನ್ನು ಪ್ರತಿನಿಧಿಯಾಗಿ ನಾಮನಿರ್ದೇಶಿಸಿರುವ ಸಹಕಾರ ಸಂಘವು ಆತನ ನಾಮನಿರ್ದೇಶನವನ್ನು ಹಿಂಪಡೆದಿದ್ದರೆ; ಅಥವಾ

(iii) ಆತನು, ಸದಸ್ಯನಾಗಿರುವ ಆ ಸಹಕಾರ ಸಂಘದ ಮಂಡಳಿಯು ಆತನನ್ನು 30ನೇ ಪ್ರಕರಣದ ಅಡಿಯಲ್ಲಿ ತೆಗೆದುಹಾಕಿದ್ದರೆ, ಅಥವಾ 31ನೇ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ವಿಶೇಷ ಅಧಿಕಾರಿಯಾಗಿದ್ದರೆ; ಮತ್ತು

(iv) ಆತನು ಪ್ರತಿನಿಧಿಯಾಗಿರುವ ಸಹಕಾರ ಸಂಘವು ಸಮಾಪನಗೊಂಡಿದ್ದರೆ,

–ಅಂಥ ಸಹಕಾರ ಸಂಘದ ನಿರ್ದೇಶಕನಾಗಿರುವುದು ಕೂಡಲೇ ನಿಂತು ಹೋಗತಕ್ಕದ್ದು."

**8. 20ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 20ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ,–

(i) (ಎ–iii)ನೇ ಖಂಡದಲ್ಲಿ "ಸಭೆಯ ದಿನಾಂಕಕ್ಕೆ" ಎಂಬ ಪದಗಳ ತರುವಾಯ "ಅಥವಾ ಚುನಾವಣೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು; ಮತ್ತು

(ii) (ಎ–v) ಖಂಡದ ತರುವಾಯ, ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, (ಎ–iv) ಹಾಗೂ (ಎ–v)ನೇ ಉಪಖಂಡಗಳಲ್ಲಿರುವ ಸದಸ್ಯರುಗಳ ಸಂದರ್ಭದಲ್ಲಿ, ಅಂಥ ಸದಸ್ಯರು ಮೂರು ವರ್ಷಗಳ ಅವಧಿಗೆ ಸರ್ವಸದಸ್ಯರ ಸಭೆ ಅಥವಾ ಮಂಡಳಿಯ ಸದಸ್ಯರ ಚುನಾವಣೆಯಲ್ಲಿ ಮತ ಚಲಾಯಿಸುವ ಹಕ್ಕನ್ನು ಹೊಂದಿರತಕ್ಕದ್ದಲ್ಲ."

(iii) (ಬಿ) ಖಂಡದಲ್ಲಿ (iv)ನೇ ಉಪಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(iv) ಯಾವ ಸಂಘದ ಪ್ರಧಾನ ಉದ್ದೇಶವು ಸಾಲ ಮತ್ತು ಮುಂಗಡವನ್ನು ನೀಡುವ ಉದ್ದೇಶವನ್ನು ಹೊಂದಿದೆಯೋ,–

(ಎ) ಅಂಥ ಸಂಘದಲ್ಲಿ ನಿಕಟಪೂರ್ವ ಸಹಕಾರಿ ವರ್ಷದ ಚುನಾವಣೆ/ಸಾಮಾನ್ಯ ಸಭೆಯ ಸಂದರ್ಭದಲ್ಲಿ ಸಂಘದ ತಗಾದೆಯ ಮೇಲೆ ಶೇಕಡ ಐವತ್ತಕ್ಕಿಂತ ಕಡಿಮೆ ವಸೂಲಾತಿ ಇದ್ದಲ್ಲಿ ಅಥವಾ

(ಬಿ) ಹಣಕಾಸು ನೀಡುವ ಬ್ಯಾಂಕು, ಕ್ರೆಡಿಟ್ ಏಜೆನ್ಸಿ ಪ್ರಕರಣಕ್ಕನುಗುಣವಾಗಿ ಹದಿನೈದು ದಿನಗಳ ಮುಂಚಿತವಾಗಿ ಆಯಾ ಸಂಸ್ಥೆಯ ತಗಾದೆಯ ಮೇಲೆ ಶೇಕಡ ಐವತ್ತರ ಭಾಗದ ವಸೂಲಿ ಅಥವಾ ವಸೂಲಿಯಾದ ಪೂರ್ತಿ ಮೊತ್ತವನ್ನು ಇವುಗಳಲ್ಲಿ ಯಾವುದು ಹೆಚ್ಚೋ ಅದನ್ನು ಪಾವತಿಸಲು ವಿಫಲವಾದಲ್ಲಿ ಅಂಥ ಸಂಘಕ್ಕೆ ಸಾಮಾನ್ಯ ಸಭೆ/ಚುನಾವಣೆಯ ಕನಿಷ್ಟ ಮೂವತ್ತು ದಿನಗಳ ಪೂರ್ವದಲ್ಲಿ ನೋಟೀಸ್ ನೀಡತಕ್ಕದ್ದು."

**9. 21ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 21ನೇ ಪ್ರಕರಣದ (3)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ಯಾವುದೇ ಇತರ ಸಹಕಾರ ಸಂಘದ ಯಾವುದೇ ಸಭೆಯಲ್ಲಿ ತನ್ನ ಪರವಾಗಿ ಮತ ಚಲಾಯಿಸಲು (2)ನೇ ಉಪಪ್ರಕರಣದ (ಎ) ಖಂಡದ ಅಡಿಯಲ್ಲಿ ಸಹಕಾರ ಸಂಘದ ಮಂಡಳಿಯಿಂದ ಒಮ್ಮೆ ನಾಮನಿರ್ದೇಶಿಸಲ್ಪಟ್ಟ ಒಬ್ಬ ಸದಸ್ಯನನ್ನು, ಮಂಡಳಿಯ ಸಭೆಯಲ್ಲಿ ಹಾಜರಿರುವ ಮತ್ತು ಮತ ಚಲಾಯಿಸುವ ಸದಸ್ಯರ ಮೂರನೇ ಎರಡರ (two third) ಬಹುಮತದಿಂದ, ಗಣನೀಯ ಕಾರಣಗಳೊಂದಿಗೆ, ಅಂಗೀಕರಿಸಿದ ಠರಾವಿನ ಹೊರತು ಬದಲಾಯಿಸತಕ್ಕದ್ದಲ್ಲ. ಆದಾಗ್ಯೂ ಸಹಕಾರ ಸಂಘವು ತನ್ನ ಪರವಾಗಿ ಎರಡಕ್ಕಿಂತ ಹೆಚ್ಚಿನ ಸಹಕಾರ ಸಂಘಗಳಲ್ಲಿ ಮತ ಚಲಾಯಿಸಲು ಮಂಡಳಿಯ ಯಾವೊಬ್ಬ ಸದಸ್ಯನನ್ನು ನಾಮನಿರ್ದೇಶಿಸತಕ್ಕದ್ದಲ್ಲ ಅಥವಾ ನೇಮಿಸತಕ್ಕದ್ದಲ್ಲ."

**10. 27ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 27ನೇ ಪ್ರಕರಣದಲ್ಲಿ,

(i) ಉಪಪ್ರಕರಣ (1)ರ ಖಂಡ (ಎನ್)ರಲ್ಲಿನ ಉಪಖಂಡ (ಎನ್–6) ರಲ್ಲಿ "ವಸೂಲಿಯಾಗದವೆಂದು" ಎಂಬ ಪದಗಳ ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ವಸೂಲಾಗದ ಸಾಲಗಳಿಗೆ ಸಂಬಂಧಪಟ್ಟಂತೆ ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಭಾರತೀಯ ರಿಸರ್ವ್ ಬ್ಯಾಂಕ್ ಕೃಷಿ ಪತ್ತಿನ ರಚನಾ ವ್ಯವಸ್ಥೆಯ ಸಹಕಾರ ಸಂಘಗಳಿಗೆ ನಬಾರ್ಡ್ ಅಥವಾ ಅಂಥ ಮಾರ್ಗಸೂಚಿಗಳಿಲ್ಲದಿದ್ದಲ್ಲಿ ನಿಬಂಧಕರು ನೀಡುವ ಮಾರ್ಗಸೂಚಿಗಳಿಗನುಗುಣವಾಗಿ ವಸೂಲಿಯಾಗದವೆಂದು ಪರಿಗಣಿಸಲಾದ ವಸೂಲಾಗದ ಋಣಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳತಕ್ಕದ್ದು."

(ii) ಉಪಪ್ರಕರಣ (4)ರ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4) ಪ್ರಾತಿನಿಧಿಕ ಸಾಮಾನ್ಯ ನಿಕಾಯವನ್ನು ರಚಿಸದ ಸಂಘಗಳಲ್ಲಿ ಸಾಮಾನ್ಯ ಸಭೆಯ ಸಭಾವಶ್ಯಕ ಸಂಖ್ಯೆ ಆಯಾ ಸಂಘದ ಉಪವಿಧಿಗಳಿಗನುಗುಣವಾಗಿರತಕ್ಕದ್ದು ಆದರೆ ಅರ್ಹ ಮತದಾರ ಸದಸ್ಯರ ಶೇಕಡ ಹತ್ತು ಅಥವಾ ಒಂದು ಸಾವಿರ ಇವೆರಡರಲ್ಲಿ ಯಾವುದು ಕಡಿಮೆಯೋ ಆ ಸಂಖ್ಯೆಯು ಕೋರಂ ಆಗಿರತಕ್ಕದ್ದು."

**11. 28ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ಎ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ "ಒಂಭತ್ತಕ್ಕಿಂತ ಕಡಿಮೆ ಇಲ್ಲದ" ಎಂಬ ಪದಗಳಿಗೆ "ಹನ್ನೊಂದಕ್ಕಿಂತ ಕಡಿಮೆಯಿಲ್ಲದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) ಉಪಪ್ರಕರಣ (2)ರ ಕೊನೆಯಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಆಡಳಿತ ಮಂಡಳಿ ಸದಸ್ಯರ ಸಂಖ್ಯೆ ಕನಿಷ್ಟ ಮತ್ತು ಗರಿಷ್ಟ ಪ್ರಮಾಣವು ಉಪಪ್ರಕರಣ (2) ರಲ್ಲಿ ನಿಗದಿಪಡಿಸಿರುವಂತೆ ಆಯಾ ಸಹಕಾರ ಸಂಘಗಳು ತಮ್ಮ ಉಪವಿಧಿಗಳಲ್ಲಿ ನಿಗದಿಪಡಿಸಿಕೊಳ್ಳತಕ್ಕದ್ದು–

(ಎ) ಆರ್ಥಿಕ ನೆರವು ಪಡೆದ ಸಹಕಾರ ಸಂಘದಲ್ಲಿ ಸರ್ಕಾರದ ನಾಮನಿರ್ದೇಶಿತ ಪ್ರಕರಣ 28ಎ(4–ಬಿ) ನಲ್ಲಿ ನಿಗದಿಪಡಿಸಿರುವಂತೆ;

(ಬಿ)ಇತರೆ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ ಪದನಿಮಿತ್ತ ಸದಸ್ಯ ಮತ್ತು ಸಾಲ ನೀಡಿಕೆ ಬ್ಯಾಂಕ್ ಅಥವಾ ಸಾಲ ನೀಡಿಕೆ ಸಂಸ್ಥೆಯ ನಾಮ ನಿರ್ದೇಶಿತ.

ಉಳಿದ ಸದಸ್ಯರನ್ನು ಪ್ರಕರಣ 29ಇನ ಷರತ್ತಿಗೊಳಪಟ್ಟು ಚುನಾವಣೆ ಮೂಲಕ ಭರ್ತಿ ಮಾಡತಕ್ಕದ್ದು."

(iii) ಉಪಪ್ರಕರಣ (3)ರ ಖಂಡ (iii) ರ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಹಿಂದುಳಿದ ವರ್ಗದವರಿಗೆ ಎರಡು ಸ್ಥಾನಗಳನ್ನು ಚುನಾವಣೆ ಮೂಲಕ ಭರ್ತಿಮಾಡತಕ್ಕದ್ದು. ಇವುಗಳಲ್ಲಿ ಒಂದು ಸ್ಥಾನವನ್ನು ಪ್ರವರ್ಗ "ಎ", ಮತ್ತೊಂದು ಸ್ಥಾನವನ್ನು ಪ್ರವರ್ಗ "ಬಿ" ವರ್ಗದವರಿಗೆ ಮೀಸಲಿಡತಕ್ಕದ್ದು."

(iv) (4)ನೇ ಉಪಪ್ರಕರಣದಲ್ಲಿ, "ಮಂಡಳಿಯು" ಎಂಬ ಪದಗಳಿಗೆ "ಮಂಡಳಿಯು ಅನ್ಯಥಾ ಉಪಬಂಧಿಸಿದುದನ್ನುಳಿದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(v) (4–ಎ) ಉಪಪ್ರಕರಣದಲ್ಲಿ ನಾಲ್ಕನೇ ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಅಲ್ಲದೇ ಪರಂತು, ನಗರ ಸಹಕಾರಿ ಬ್ಯಾಂಕುಗಳಿಗೆ ಸಹಯೋಜಿತರಾದ ನಿರ್ದೇಶಕರು ಭಾರತೀಯ ರಿಸರ್ವ್ ಬ್ಯಾಂಕ್ ಗೊತ್ತುಪಡಿಸಿದ ಅಗತ್ಯ ತಿಳುವಳಿಕೆ ಮತ್ತು ಅನುಭವವನ್ನು ಹೊಂದಿರದಿದ್ದಲ್ಲಿ, ಅಂಥ ಬ್ಯಾಂಕುಗಳ ಮಂಡಳಿಯು ಅಂಥ ನಿರ್ದೇಶಕರಿಗೆ ತಮ್ಮ ಅಹವಾಲವನ್ನು ಹೇಳಿಕೊಳ್ಳಲು

ಅವಕಾಶವನ್ನು ನೀಡಿದ ತರುವಾಯ ಭಾರತೀಯ ರಿಸರ್ವ್ ಬ್ಯಾಂಕು ನಿರ್ದೇಶನವನ್ನು ನೀಡಿದ ಎರಡು ತಿಂಗಳೊಳಗೆ ಅಂಥ ವ್ಯಕ್ತಿಗಳನ್ನು ತೆಗೆದುಹಾಕತಕ್ಕದ್ದು."

(vi) (4–ಬಿ) ಉಪಪ್ರಕರಣದ (1)ನೇ ಖಂಡದ ಕೊನೆಯಲ್ಲಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ನಾಮನಿರ್ದೇಶಿತ ವ್ಯಕ್ತಿಯು ಸಹಕಾರ ಸಂಘದ ಎಲ್ಲಾ ಸಭೆಗಳಲ್ಲಿ ಹಾಗೂ ಚುನಾವಣೆಗಳಲ್ಲಿ ಮತ ಚಲಾಯಿಸಬಹುದು; ಹಾಗೂ ಸಹಕಾರ ಸಂಘದ ಎಲ್ಲಾ ಚುನಾವಣೆಗಳಲ್ಲಿ ಸ್ಪರ್ಧಿಸಬಹುದು. ಪದನಿಮಿತ್ತ ಸದಸ್ಯರು ಹಾಗೂ ಹಣಕಾಸು ಅಥವಾ ಕ್ರೆಡಿಟ್ ಏಜೆನ್ಸಿಯಿಂದ ನಾಮನಿರ್ದೇಶಿತರು ಮತ ಚಲಾಯಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಆದರೆ ಪದಾಧಿಕಾರಿಯಾಗಿ ಸ್ಪರ್ಧಿಸಲು ಅರ್ಹರಾಗಿರುವುದಿಲ್ಲ."

**12. 28ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ಬಿ ಪ್ರಕರಣದ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಮಂಡಳಿಯ ಚುನಾವಣೆಯನ್ನು ಮಂಡಳಿಯ ಪದಾವಧಿಯು ಮುಕ್ತಾಯಗೊಳ್ಳುವ ಪೂರ್ವದಲ್ಲಿಯೇ ನಡೆಸಬಹುದು."

**13. 28ಸಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ಸಿ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ,–

(i) (ಇ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಇ) ಸಹಕಾರ ಚುನಾವಣಾ ಪ್ರಾಧಿಕಾರದ ಮೇಲ್ವಿಚಾರಣೆಯ ಅಡಿಯಲ್ಲಿ ಸಭಾಧ್ಯಕ್ಷರನ್ನು ಮತ್ತು ಅಂಥ ಇತರ ಪದಾಧಿಕಾರಿಗಳನ್ನು ಚುನಾಯಿಸುವುದಕ್ಕೆ;"

(ii) ಖಂಡ (ಜಿ) ರಲ್ಲಿ **"ನೌಕರರು"** ಎಂಬ ಪದಗಳ ನಂತರ **"ನಿಯಮಗಳಲ್ಲಿ ನಿಗದಿಪಡಿಸಿದಂತೆ ನಿರ್ಧರಿಸುವುದು"** ಎಂಬ ಪದಗಳನ್ನು ಸೇರಿಸತಕ್ಕದ್ದು.

**14. 28ಡಿ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 28ಸಿ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"28ಡಿ. ಸಹಕಾರ ಸಂಘಗಳ ಸದಸ್ಯರು, ನಿರ್ದೇಶಕರು, ಪದಾಧಿಕಾರಿ ಮತ್ತು ಸಿಬ್ಬಂದಿಗಳಿಂದ ವಿದೇಶ ಪ್ರವಾಸ.–** ಸಹಕಾರ ಸಂಘಗಳ ಸದಸ್ಯರು, ನಿರ್ದೇಶಕರು, ಪದಾಧಿಕಾರಿಗಳು ಮತ್ತು ಸಿಬ್ಬಂದಿಯವರು ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ಸಹಕಾರ ಸಂಘದ ವೆಚ್ಚದಲ್ಲಿ ವಿದೇಶ ಪ್ರವಾಸವನ್ನು ಕೈಗೊಳ್ಳತಕ್ಕದ್ದಲ್ಲ."

**15. 29ಬಿ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 29ಬಿ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"29ಬಿ. ಮಂಡಳಿಯ ಸದಸ್ಯನ ಅಥವಾ ಸಹಕಾರ ಸಂಘದ ಪದಾಧಿಕಾರಿಯ ರಾಜೀನಾಮೆ.–** ಸಹಕಾರ ಸಂಘದ ಮಂಡಳಿಯ ಸದಸ್ಯನು ಅಥವಾ ಸಹಕಾರ ಸಂಘದ ಪದಾಧಿಕಾರಿಯು, ಮಂಡಳಿಯ ಸದಸ್ಯತ್ವಕ್ಕೆ ಅಥವಾ ಸಂದರ್ಭಾನುಸಾರವಾಗಿ, ಸಂಘದ ಪದಾಧಿಕಾರಿಯ ಸ್ಥಾನಕ್ಕೆ, ತನ್ನ ಕೈ ಬರಹದ ಮೂಲಕ ರಾಜೀನಾಮೆಯನ್ನು ಮುಖ್ಯಕಾರ್ಯನಿರ್ವಾಹಕನಿಗೆ ಸಲ್ಲಿಸಬಹುದು ಮತ್ತು ಮುಖ್ಯಕಾರ್ಯನಿರ್ವಾಹಕನಿಗೆ ಬರಹದಲ್ಲಿ ಸಲ್ಲಿಸಲಾದ ಅಂಥ ರಾಜೀನಾಮೆಯನ್ನು ಸಲ್ಲಿಸಿದ ದಿನದಿಂದ ಹದಿನೈದು ದಿನಗಳೊಳಗೆ ಅಂಥ ನಿರ್ದೇಶಕರು ಅಥವಾ ಪದಾಧಿಕಾರಿಯು ತನ್ನ ಕೈ ಬರಹದ ಮೂಲಕ ಹಿಂತೆಗೆದುಕೊಳ್ಳದ ಹೊರತು, ಹಾಗೆ ತಿಳಿಸಿದ ಅಂಥ ದಿನಾಂಕದಿಂದ ಹದಿನೈದು ದಿನಗಳು ಮುಕ್ತಾಯವಾದ ಮೇಲೆ ಮಂಡಳಿಯ ಸದಸ್ಯತ್ವದ ಅಥವಾ ಸಂದರ್ಭಾನುಸಾರವಾಗಿ ಪದಾಧಿಕಾರಿಯ ಆ ಸ್ಥಾನವು ಖಾಲಿಯಾಗತಕ್ಕದ್ದು. ಮುಖ್ಯಕಾರ್ಯನಿರ್ವಾಹಕನು, ಅಂಥ ಪತ್ರವನ್ನು ಪಡೆದ ತರುವಾಯದಲ್ಲಿ ನಡೆದ ಮಂಡಳಿಯ ಸಭೆಯ ಮುಂದೆ ರಾಜೀನಾಮೆ ಪತ್ರವನ್ನು ಇಡತಕ್ಕದ್ದು. ರಾಜೀನಾಮೆ ನೀಡಿದ ಸದಸ್ಯನು ಸಂಘದ ನಾಮನಿರ್ದೇಶಿತ ಸದಸ್ಯನಾಗಿದ್ದರೆ, ಮುಖ್ಯಕಾರ್ಯನಿರ್ವಾಹಕನು ರಾಜೀನಾಮೆ ಪತ್ರವನ್ನು ಸ್ವೀಕರಿಸಿದ ತಕ್ಷಣ ನಾಮನಿರ್ದೇಶನ ಸಂಘಕ್ಕೆ ತಿಳಿಸತಕ್ಕದ್ದು."

**16. 29ಸಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ಸಿ ಪ್ರಕರಣದ (1)ನೇ ಉಪಪ್ರಕರಣದ (ಒ) ಖಂಡವನ್ನು ಬಿಟ್ಟು ಬಿಡತಕ್ಕದ್ದು.

**17. 29ಇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ಇ ಪ್ರಕರಣದಲ್ಲಿ ಎರಡನೇ ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಅಲ್ಲದೇ ಪರಂತು, ಆಕಸ್ಮಿಕ ರಿಕ್ತತೆಯ ಸ್ಥಾನಗಳನ್ನು ರಿಕ್ತತೆಯಾದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಆಡಳಿತ ಮಂಡಳಿಯು ತುಂಬಲು ವಿಫಲವಾದಲ್ಲಿ ಅಂಥ ರಿಕ್ತ ಸ್ಥಾನವನ್ನು ನಿಬಂಧಕರು ನಾಮನಿರ್ದೇಶನದ ಮೂಲಕ ತುಂಬತಕ್ಕದ್ದು."

**18. 29ಜಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ಜಿ ಪ್ರಕರಣದ (1)ನೇ ಉಪಪ್ರಕರಣದಲ್ಲಿ, ಎರಡನೇ ಪರಂತುಕದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಅಲ್ಲದೇ ಪರಂತು, ಸಂಘವು ಮೂರು ತಿಂಗಳುಗಳೊಳಗೆ ಹಾಗೆ ಮಾಡಲು ವಿಫಲವಾದಲ್ಲಿ, ಸರ್ಕಾರ ಅಥವಾ ಸಂದರ್ಭಾನುಸಾರವಾಗಿ, ರಿಜಿಸ್ಟ್ರಾರನು ಅದಾಗಿಯೇ ಅಥವಾ ತಾನಾಗಿಯೇ, ಆ ಸಹಕಾರ ಸಂಘಕ್ಕೆ ಮುಖ್ಯಕಾರ್ಯನಿರ್ವಹಣಾಧಿಕಾರಿಯನ್ನು ನೇಮಿಸಬಹುದು."

**19. 30ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 30ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದ (v)ನೇ ಖಂಡದಲ್ಲಿ, ಎರಡನೇ ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಅಲ್ಲದೇ ಪರಂತು, (2)ನೇ ಉಪಪ್ರಕರಣದ ಅಡಿಯಲ್ಲಿ ತೆಗೆದುಹಾಕಲಾದ ಮಂಡಳಿಯ ಯಾವೊಬ್ಬ ಸದಸ್ಯನು, ತೆಗೆದುಹಾಕಲಾದ ದಿನಾಂಕದಿಂದ ಒಂದು ವರ್ಷದ ಅವಧಿಗಾಗಿ ಅಂಥ ಸಹಕಾರ ಸಂಘದ ಅಥವಾ ಇತರ ಯಾವುದೇ ಇತರ ಸಹಕಾರ ಸಂಘದ ಮಂಡಳಿಯ ಸದಸ್ಯನಾಗಿ ಚುನಾಯಿತನಾಗಲು ಅರ್ಹನಾಗತಕ್ಕದ್ದಲ್ಲ ಮತ್ತು ಅಂಥ ಆದೇಶವನ್ನು ಯಾರ ವಿರುದ್ಧವಾಗಿ ಮಾಡಲಾಗಿದೆಯೋ ಆ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ಹೊರತು, ಮಂಡಳಿಯ ಚುನಾವಣೆಯಲ್ಲಿ ಸ್ಪರ್ಧಿಸುವುದಕ್ಕಾಗಿ ಅನರ್ಹನಾಗಿರುವನೆಂಬ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ." ಮತ್ತು

(ii) (6)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ತೆಗೆದುಹಾಕಲಾದ ಮಂಡಳಿಯ ಯಾವೊಬ್ಬ ಸದಸ್ಯನು, ತೆಗೆದುಹಾಕಲಾದ ದಿನಾಂಕದಿಂದ ಒಂದು ವರ್ಷದ ಅವಧಿಗಾಗಿ ಅಂಥ ಬ್ಯಾಂಕು ಅಥವಾ ಇತರ ಯಾವುದೇ ಸಹಕಾರ ಸಂಘದ ಮಂಡಳಿಯ ಸದಸ್ಯನಾಗಿ ಚುನಾಯಿತನಾಗಲು ಅರ್ಹನಾಗತಕ್ಕದ್ದಲ್ಲ ಮತ್ತು ಅಂಥ ಆದೇಶವನ್ನು ಯಾರ ವಿರುದ್ಧವಾಗಿ ಮಾಡಲಾಗಿದೆಯೋ ಆ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ಹೊರತು, ಅನರ್ಹನಾಗಿರುವನೆಂಬ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ."

**20. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣದ (5)ನೇ ಉಪಪ್ರಕರಣದಲ್ಲಿ "ಅದರ ಉಪವಿಧಿಗಳಿಗನುಸಾರವಾಗಿ" ಎಂಬ ಪದಗಳಿಗೆ "ಅಧಿನಿಯಮ, ನಿಯಮಗಳು ಮತ್ತು ಅದರ ಉಪವಿಧಿಗಳಿಗನುಸಾರವಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**21. 39ಎ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 39ಎ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ, "ಅನ್ವಯವಾಗಬಹುದಾದ ಮಟ್ಟಿಗೆ," ಎಂಬ ಪದಗಳು ಮತ್ತು ಅಲ್ಪವಿರಾಮದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಸಹಕಾರ ಚುನಾವಣಾ ಪ್ರಾಧಿಕಾರದ ಅಧೀಕ್ಷಣೆಯಡಿಯಲ್ಲಿ,"

(ii) (2)ನೇ ಉಪಪ್ರಕರಣದಲ್ಲಿ, (ಬಿ),(ಸಿ) ಮತ್ತು (ಡಿ) ಖಂಡಗಳಿಗೆ ಈ ಮುಂದಿನದನ್ನು ಅನುಕ್ರಮವಾಗಿ ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ)ಎರಡನೇ ಹಂತದಲ್ಲಿ ಸೆಕೆಂಡರಿ ಸಹಕಾರ ಸಂಘಗಳ ಸಂಬಂಧದಲ್ಲಿನ ಚುನಾವಣೆಗಳು ನಡೆಯತಕ್ಕದ್ದು;

(ಸಿ)ಮೂರನೇ ಹಂತದಲ್ಲಿ ಸಂಯುಕ್ತ ಸಹಕಾರ ಸಂಘಗಳ ಸಂಬಂಧದಲ್ಲಿನ ಚುನಾವಣೆಗಳು ನಡೆಯತಕ್ಕದ್ದು;

(ಡಿ) ನಾಲ್ಕನೇ ಹಂತದಲ್ಲಿ ಅಪೆಕ್ಸ್ ಸಹಕಾರ ಸಂಘಗಳ ಸಂಬಂಧದಲ್ಲಿನ ಚುನಾವಣೆಗಳು ನಡೆಯತಕ್ಕದ್ದು."

(iii) (3)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**22. 39ಎಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 39ಎಎ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ರಾಜ್ಯದಲ್ಲಿನ ಸಹಕಾರ ಸಂಘಗಳಿಗೆ ನಡೆಯುವ ಎಲ್ಲಾ ಚುನಾವಣೆಗಳನ್ನು ನಡೆಸುವ ಮತ್ತು ತತ್ಸಂಬಂಧಿತ ಮತದಾರರ ಪಟ್ಟಿಗಳನ್ನು ತಯಾರಿಸುವ ಕಾರ್ಯದ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣವು ಸಹಕಾರ ಚುನಾವಣಾ ಪ್ರಾಧಿಕಾರ ನಿಹಿತವಾಗಿರತಕ್ಕದ್ದು."

(ii) (3)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ಸರ್ಕಾರವು, ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ದರ್ಜೆಯ ಅಧಿಕಾರಿಯಾಗಿರುವ ಅಥವಾ ಅಧಿಕಾರಿಯಾಗಿದ್ದ ವ್ಯಕ್ತಿಯೊಬ್ಬನನ್ನು ಸಹಕಾರ ಚುನಾವಣಾ ಆಯುಕ್ತರನ್ನಾಗಿ ನೇಮಕ ಮಾಡತಕ್ಕದ್ದು ಮತ್ತು ಅಂಥ ಸಹಕಾರ ಚುನಾವಣಾ ಆಯುಕ್ತರು ಐದು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು."

(iii) (4)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು, ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್ ದರ್ಜೆಗೆ ಕಡಿಮೆಯಲ್ಲದ ಅಧಿಕಾರಿಯಾಗಿರುವ ವ್ಯಕ್ತಿಯೊಬ್ಬನನ್ನು, ನಿಯಮಿಸಬಹುದಾದಂಥ ಅವಧಿಗಾಗಿ, ಸಹಕಾರ ಚುನಾವಣಾ ಪ್ರಾಧಿಕಾರದ ಕಾರ್ಯದರ್ಶಿಯನ್ನಾಗಿ ನೇಮಕ ಮಾಡತಕ್ಕದ್ದು."

(iv) (6), (7) ಮತ್ತು (8)ನೇ ಉಪಪ್ರಕರಣಗಳಲ್ಲಿ "ರಾಜ್ಯಪಾಲ" ಎಂಬ ಪದವು ಬರುವ ಕಡೆಗಳಲ್ಲೆಲ್ಲ, "ಸರ್ಕಾರ" ಎಂಬ ಪದವನ್ನು ಪ್ರತ್ಯಯಗಳೊಂದಿಗೆ ಪ್ರತಿಯೋಜಿಸತಕ್ಕದ್ದು.

(v) (10)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(10) ಸಹಕಾರ ಚುನಾವಣಾ ಪ್ರಾಧಿಕಾರವು, ರಾಜ್ಯ ಸರ್ಕಾರದೊಡನೆ ಸಮಾಲೋಚಿಸಿ, ಸಹಕಾರ ಚುನಾವಣಾ ಪ್ರಾಧಿಕಾರದ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಅಗತ್ಯವಿರುವ ಅಧಿಕಾರಿಗಳು ಮತ್ತು ಇತರ ನೌಕರರ ಸಂಖ್ಯೆಯನ್ನು ನಿರ್ಧರಿಸತಕ್ಕದ್ದು."

(vi) (12)ನೇ ಉಪಪ್ರಕರಣದಲ್ಲಿ, "ಆಯೋಗದ" ಎಂಬ ಪದಕ್ಕೆ "ಪ್ರಾಧಿಕಾರದ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(vii) (15)ನೇ ಉಪಪ್ರಕರಣದಲ್ಲಿ, (ಎ) ಮತ್ತು (ಬಿ) ಖಂಡಗಳಲ್ಲಿ "ಆಯೋಗಕ್ಕೆ" ಮತ್ತು "ಆಯೋಗವು" ಎಂಬ ಪದಗಳಿಗೆ ಅನುಕ್ರಮವಾಗಿ "ಪ್ರಾಧಿಕಾರಕ್ಕೆ" ಮತ್ತು "ಪ್ರಾಧಿಕಾರವು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**23. 39ಐ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 39ಐ ಪ್ರಕರಣದಲ್ಲಿ, (2) ಮತ್ತು (3)ನೇ ಉಪಪ್ರಕರಣಗಳನ್ನು ಬಿಟ್ಟು ಬಿಡತಕ್ಕದ್ದು.

**24. 57ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 57ನೇ ಪ್ರಕರಣದ ಉಪಪ್ರಕರಣ (2ಎ)ರ ಕೊನೆಯಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಪಟ್ಟಣ ಸಹಕಾರ ಬ್ಯಾಂಕುಗಳು ತಮ್ಮ ನಿವ್ವಳ ಲಾಭದಲ್ಲಿ ಉಪಪ್ರಕರಣ (2ಎ) ರಲ್ಲಿ ನಿಗದಿಪಡಿಸಿರುವ ಶೇಕಡ ಎರಡರಷ್ಟು ಸಹಕಾರ ಶಿಕ್ಷಣ ನಿಧಿಯ ಜೊತೆಗೆ ಶೇಕಡಾ ಒಂದರಷ್ಟನ್ನು ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳಕ್ಕೆ ವಂತಿಗೆ ನೀಡತಕ್ಕದ್ದು."

**25. 58ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 58ನೇ ಪ್ರಕರಣದಲ್ಲಿ, (ಇ) ಖಂಡದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಸಹಕಾರ ಸಂಘವು, ಅಂಥ ಸಂಘದ ಕಾರ್ಯನಿರ್ವಹಣಾ ಪ್ರದೇಶದ ಹೊರಗೆ ನಿಧಿಯನ್ನು ಹೂಡಿಕೆ ಅಥವಾ ಠೇವಣಿ ಮಾಡಿದಲ್ಲಿ, ರಿಜಿಸ್ಟ್ರಾರ್‌ರಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು."

**26. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದ ಎರಡನೇ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಮತ್ತು ಪರಂತು, ರಾಜ್ಯ ಸಹಕಾರ ಬ್ಯಾಂಕು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಲೆಕ್ಕಪರಿಶೋಧನೆ ನಡೆಸಲು ನಿಗದಿಪಡಿಸಿದ ವಿದ್ಯಾರ್ಹತೆ ಮತ್ತು ಅನುಭವ ಹೊಂದಿರುವ ಲೆಕ್ಕಪರಿಶೋಧಕರು ಮತ್ತು ಸಂಸ್ಥೆಗಳ ಪಟ್ಟಿಯನ್ನು ರಾಷ್ಟ್ರೀಯ ಬ್ಯಾಂಕು ತಯಾರಿಸತಕ್ಕದ್ದು."

(ii) (2)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕಗಳನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

"ಪರಂತು, ಸಂಘವು ಸಹಕಾರಿ ವರ್ಷದ ಲೆಕ್ಕಪರಿಶೋಧನೆಯನ್ನು ಮಾಡಿಸಲು ಮಹಾ ಸಭೆಯಲ್ಲಿ ಲೆಕ್ಕಪರಿಶೋಧಕನನ್ನು ಅಥವಾ ಲೆಕ್ಕಪರಿಶೋಧನಾ ಫರ್ಮನ್ನು ನೇಮಿಸಲು ಮತ್ತು ಅದನ್ನು ತಿಳಿಸಲು ವಿಫಲವಾಗಿದೆಯೆಂದು ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನಿಗೆ ಮನದಟ್ಟಾದಲ್ಲಿ, ಸಂಬಂಧಿತ ಸಂಘಕ್ಕೆ ಹೇಳಿಕೆ ನೀಡಲು ಅವಕಾಶವನ್ನು ಲಿಖಿತದಲ್ಲಿ ನೀಡಿದ ತರುವಾಯ ಹಾಗೂ ಲೆಕ್ಕ ಪರಿಶೋಧಕನನ್ನು ಅಥವಾ ಲೆಕ್ಕಪರಿಶೋಧನಾ ಫರ್ಮನ್ನು ನೇಮಕ ಮಾಡಿಲ್ಲದಿರುವುದನ್ನು ಖಚಿತಪಡಿಸಿಕೊಂಡ ನಂತರ, ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನು, ಲೆಕ್ಕಪರಿಶೋಧಕರ ಅಥವಾ ಲೆಕ್ಕಪರಿಶೋಧನಾ ಫರ್ಮ್‌ಗಳ ಅನುಮೋದಿತ ಪಟ್ಟಿಯೊಳಗಿನಿಂದ ಸಂಘದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ಮಾಡಲು ಲೆಕ್ಕಪರಿಶೋಧಕ ಅಥವಾ ಲೆಕ್ಕಪರಿಶೋಧನಾ ಫರ್ಮನ್ನು ನೇಮಿಸಬಹುದು ಮತ್ತು ಹಾಗೆ ನೇಮಕಗೊಂಡ ಲೆಕ್ಕಪರಿಶೋಧಕರನ್ನು ಅಥವಾ ಲೆಕ್ಕಪರಿಶೋಧನಾ ಫರ್ಮನ್ನು ಪರಿಗಣನೆಯಲ್ಲಿರುವ ಆ ನಿರ್ದಿಷ್ಟ ಸಹಕಾರಿ ವರ್ಷಕ್ಕೆ ಆ ಸಂಘದ ಲೆಕ್ಕಪರಿಶೋಧನೆಯನ್ನು ನಡೆಸುವ ಉದ್ದೇಶಕ್ಕಾಗಿ ಲೆಕ್ಕಪರಿಶೋಧಕರೆಂದು ಅಥವಾ ಲೆಕ್ಕ ಪರಿಶೋಧನಾ ಫರ್ಮ್‌ಯೆಂದು ಭಾವಿಸತಕ್ಕದ್ದು;

ಮತ್ತು ಪರಂತು, ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ನಿರ್ವಹಿಸುವ ಲೆಕ್ಕಪರಿಶೋಧಕರ ಅಥವಾ ಲೆಕ್ಕಪರಿಶೋಧನಾ ಫರ್ಮ್‌ಗಳ ಪಟ್ಟಿಯಲ್ಲಿ ನಮೂದಿಸಿರುವ ಸರ್ಕಾರಿ ಲೆಕ್ಕಪರಿಶೋಧಕರ ಸಂದರ್ಭದಲ್ಲಿ ಅವರನ್ನು ಪದನಾಮ ಮಾತ್ರದಿಂದಲೇ ನಮೂದಿಸತಕ್ಕದ್ದು ಮತ್ತು ಆ ಲೆಕ್ಕಪರಿಶೋಧಕರ ಪಟ್ಟಿಯಿಂದ ಸರ್ಕಾರಿ ಲೆಕ್ಕಪರಿಶೋಧಕರನ್ನು ಸಹಕಾರ ಸಂಘವು ಆಯ್ಕೆ ಮಾಡಿಕೊಂಡಲ್ಲಿ, ಇಲಾಖಾ ಲೆಕ್ಕಪರಿಶೋಧಕರನ್ನು ಅವರ ಪದನಾಮದಿಂದ ಮಾತ್ರವೇ ಲೆಕ್ಕಪರಿಶೋಧನೆಯನ್ನು ನಡೆಸುವಂತೆ ಮಾಡಲು ಸಹಕಾರ ಸಂಘವು, ಸಂಬಂಧಿಸಿದ ಜಿಲ್ಲೆಯ ಸಹಕಾರಿ ಲೆಕ್ಕಪರಿಶೋಧನಾ ಉಪನಿರ್ದೇಶಕರಿಗೆ ತಿಳಿಸತಕ್ಕದ್ದು."

(iii) (13)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(13ಎ) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಸಹಕಾರಿ ಸಂಘದ ಲೆಕ್ಕಪರಿಶೋಧನೆಯ ನಿರ್ದೇಶಕನು, ರಾಜ್ಯ ಸರ್ಕಾರದ ಅನುಮೋದನೆಗೆ ಒಳಪಟ್ಟು, ಹಿಂದಿನ ಮೂರು ವರ್ಷಗಳಿಗೆ ಸಂಬಂಧಿಸಿದ ಯಾವುದೇ ಸಹಕಾರ ಸಂಘದ ಲೆಕ್ಕಪರಿಶೋಧಿತ ನಿರ್ದಿಷ್ಟ ಲೆಕ್ಕಪತ್ರವನ್ನು ಅಥವಾ ಲೆಕ್ಕಪತ್ರಗಳನ್ನು ಪುನರ್‌ಪರಿಶೀಲಿಸಲು ಅಥವಾ ಪುನರ್‌ಸತ್ಯಾಪನೆ ಮಾಡಲು ಮತ್ತು ಅಂಥ ಪುನರ್‌ಪರಿಶೀಲನೆ ಅಥವಾ ಪುನರ್‌ಸತ್ಯಾಪನೆಯ ಅವಧಿಯಲ್ಲಿ ಗಮನಿಸಲಾದ ಲೋಪಗಳನ್ನು, ಹೊರಡಿಸಬೇಕಾದ ಮುಂದಿನ ಲೆಕ್ಕಪರಿಶೋಧನಾ ವರದಿಯಲ್ಲಿ ಸರಿಪಡಿಸಿಕೊಳ್ಳುವಂತೆ ಸಂಬಂಧಪಟ್ಟ ಲೆಕ್ಕಪರಿಶೋಧಕನಿಗೆ ತಿಳಿಸಲು ಅಧಿಕಾರವನ್ನು ಹೊಂದಿರತಕ್ಕದ್ದು."

(iv) (19)ನೇ ಉಪಪ್ರಕರಣದಲ್ಲಿ "ಸಂಘಗಳಿಂದ ಭರಿಸತಕ್ಕದ್ದು ಮತ್ತು" ಎಂಬ ಪದಗಳ ತರುವಾಯ "ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕರು ಕಾಲಕಾಲಕ್ಕೆ ಹೊರಡಿಸಿದ ಮಾರ್ಗಸೂಚಿಗಳಿಗೆ ಅನುಸಾರವಾಗಿ ಸಂಘದ ಕಾರ್ಯಶೀಲ (ವರ್ಕಿಂಗ್) ಬಂಡವಾಳ ಮತ್ತು ವಹಿವಾಟಿನ (ಟರ್ನ್‌ಓವರ್) ಆಧಾರದ ಮೇಲೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

(v) (20)ನೇ ಉಪಪ್ರಕರಣದ ತರುವಾಯದ ವಿವರಣೆಯಲ್ಲಿ,–

(ಎ) (i)ನೇ ಖಂಡದಲ್ಲಿ "ಅಥವಾ ಕಾಸ್ಟ್ ಮತ್ತು ವರ್ಕ್ಸ್ ಅಕೌಂಟೆಂಟ್ ಅಧಿನಿಯಮ, 1959ರ ಅರ್ಥವ್ಯಾಪ್ತಿಯೊಳಗೆ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಸರಿಯಾದ ತಿಳುವಳಿಕೆಯುಳ್ಳ ಮತ್ತು ಲೆಕ್ಕಪರಿಶೋಧನೆಯಲ್ಲಿ ಕನಿಷ್ಠ ಮೂರು ವರ್ಷಗಳ ಅನುಭವವುಳ್ಳ ಒಬ್ಬ ಕಾಸ್ಟ್ ಅಕೌಂಟೆಂಟನು ಕನ್ನಡ ಭಾಷೆಯ ಕಾರ್ಯನಿರ್ವಹಣಾ ತಿಳುವಳಿಕೆಯುಳ್ಳವನಾಗಿರತಕ್ಕದ್ದು," ಎಂಬ ಪದಗಳನ್ನು ಕೊನೆಯಲ್ಲಿ ಸೇರಿಸತಕ್ಕದ್ದು; ಮತ್ತು

(ಬಿ) (ii)ನೇ ಖಂಡದಲ್ಲಿ "ಒಂದು ಅಥವಾ ಹೆಚ್ಚು ಚಾರ್ಟರ್ಡ್ ಅಕೌಂಟೆಂಟರು" ಎಂಬ ಪದಗಳ ತರುವಾಯ "ಅಥವಾ ಕಾಸ್ಟ್ ಅಂಡ್ ವರ್ಕ್ಸ್ ಅಕೌಂಟೆಂಟ್ ಅಧಿನಿಯಮ, 1959ರ ಅರ್ಥ ವ್ಯಾಪ್ತಿಯಲ್ಲಿರುವ ಒಂದಕ್ಕಿಂತ ಹೆಚ್ಚು ಕಾಸ್ಟ್ ಅಕೌಂಟೆಂಟ್‌ರ ಒಂದು ಫರ್ಮ್" ಎಂಬ ಪದಗಳನ್ನು ಸೇರಿಸತಕ್ಕದ್ದು.

**27. 66ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 66ನೇ ಪ್ರಕರಣದಲ್ಲಿ, "ಪರಿಶೀಲನೆಯನ್ನು ನಡೆಸುವ" ಎಂಬ ಪದಗಳ ತರುವಾಯ "ಅಥವಾ ಅನ್ಯಥಾ" ಎಂಬ ಪದಗಳನ್ನು ಸೇರಿಸತಕ್ಕದ್ದು.

**28. 70ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 70ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ, "ಮಂಡಳಿಯ ಚುನಾವಣೆ ಮತ್ತು ಪದಾಧಿಕಾರಿಗಳ ಚುನಾವಣೆಗೆ ಸಂಬಂಧಿಸಿದ ವಿವಾದವನ್ನು ಹೊರತುಪಡಿಸಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ii) (4) ಮತ್ತು (5)ನೇ ಉಪಪ್ರಕರಣಗಳನ್ನು ಬಿಟ್ಟುಬಿಡತಕ್ಕದ್ದು.

**29. 98ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 98ಬಿ ಪ್ರಕರಣದಲ್ಲಿ,–

(ಎ) "28ಎ" ಎಂಬ ಅಂಕಿ ಮತ್ತು ಅಕ್ಷರದ ತರುವಾಯ "28ಸಿ, 28ಡಿ," ಎಂಬ ಅಂಕಿಗಳು, ಅಕ್ಷರಗಳು ಮತ್ತು ಅಲ್ಪವಿರಾಮ ಚಿಹ್ನೆಗಳನ್ನು ಸೇರಿಸತಕ್ಕದ್ದು.

(ಬಿ) "30" ಎಂಬ ಅಂಕಿಯ ತರುವಾಯ, "30ಬಿ," ಎಂಬ ಅಂಕಿ, ಅಕ್ಷರ ಮತ್ತು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು; ಮತ್ತು

(ಸಿ) "ಮತ್ತು 109ನೇ" ಎಂಬ ಪದ ಮತ್ತು ಅಂಕಿಗಳಿಗೆ ",109 ಮತ್ತು 121ನೇ" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಅಂಕಿಗಳು ಮತ್ತು ಪದವನ್ನು ಪ್ರತಿಯೋಜಿಸತಕ್ಕದ್ದು.

**30. 98ಇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 98ಇ ಪ್ರಕರಣದ (iii)ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು.

**31. 98ವೈ ಪ್ರಕರಣವನ್ನು ಬಿಟ್ಟು ಬಿಡತಕ್ಕದ್ದು.–** ಮೂಲ ಅಧಿನಿಯಮದ 98ವೈ ಪ್ರಕರಣವನ್ನು ಬಿಟ್ಟು ಬಿಡತಕ್ಕದ್ದು.

**32. 105ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 105ಎ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ "ಮಹಾ ಸಭೆಗೆ" ಎಂಬ ಪದಗಳಿಗೆ "ರಿಜಿಸ್ಟ್ರಾರನಿಗೆ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ರಿಜಿಸ್ಟ್ರಾರ್‌ನು, ಸಹಕಾರ ಸಂಘಕ್ಕೆ ಹಾಗೂ ಪ್ರವೇಶವನ್ನು ಕೋರುತ್ತಿರುವ ವ್ಯಕ್ತಿಗೆ ನೋಟೀಸನ್ನು ನೀಡಿದ ತರುವಾಯ ಮತ್ತು ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿ, ಸೂಕ್ತವೆಂದು ಭಾವಿಸಬಹುದಾದ ಅಂಥ ಆದೇಶವನ್ನು ಹೊರಡಿಸತಕ್ಕದ್ದು. ಸಹಕಾರ ಸಂಘವು ಆದೇಶವನ್ನು ಸ್ವೀಕರಿಸಿದ ಹದಿನೈದು ದಿನಗಳೊಳಗಾಗಿ ತೀರ್ಮಾನವನ್ನು ಜಾರಿಗೆ ತರತಕ್ಕದ್ದು."

**33. 132ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 132 ಪ್ರಕರಣದ ಉಪಪ್ರಕರಣ (2) ರಲ್ಲಿ "ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ" ಎಂಬ ಪದಗಳ ನಂತರ "ಅಥವಾ ಯಾವುದೇ ಸ್ಪಷ್ಟೀಕರಣವಿದ್ದಲ್ಲಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಭಾರತ ಸಂವಿಧಾನದ 97ನೇ ತಿದ್ದುಪಡಿಯನ್ನು ಗಮನದಲ್ಲಿಟ್ಟುಕೊಂಡು ಈ ಮುಂದಿನವುಗಳಿಗಾಗಿ, ಉಪಬಂಧವನ್ನು ಕಲ್ಪಿಸುವುದಕ್ಕಾಗಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು (1959ರ ಕರ್ನಾಟಕ ಅಧಿನಿಯಮ ಸಂಖ್ಯೆ:11) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಮೀಸಲಾತಿಯನ್ನು ಕಲ್ಪಿಸುವ ಮೂಲಕ ಸಾಮಾಜಿಕ ನ್ಯಾಯವನ್ನು ಅನುಸರಿಸುವುದು;

(2) "ಆಯೋಗ" ಎಂಬ ಪದಕ್ಕೆ "ಪ್ರಾಧಿಕಾರ" ಎಂಬ ಪದವನ್ನು ಪ್ರತಿಯೋಜಿಸುವುದು;

(3) ಪ್ರತ್ಯಾಯೋಜನೆ ಮತ್ತು ನಾಮನಿರ್ದೇಶಿತ ಪದಗಳನ್ನು ಪರಿಭಾಷಿಸುವುದು;

(4) ಉಪವಿಧಿಗಳಿಗೆ ತಿದ್ದುಪಡಿಗಳನ್ನು ಮಾಡುವುದಕ್ಕೆ ರಿಜಿಸ್ಟ್ರಾರನಿಗೆ ಅಧಿಕಾರ ನೀಡುವುದು;

(5) ಸಹವರ್ತಿ ಸದಸ್ಯನಿಗೆ ಗರಿಷ್ಠ ಮಿತಿಯನ್ನು ನಿಯಮಿಸುವುದು;

(6) ಫೆಡರಲ್ ಮತ್ತು ಅಪೆಕ್ಸ್ ಸಂಘದ ನಿರ್ದೇಶತ್ವವನ್ನು ರದ್ದುಗೊಳಿಸುವುದು;

(7) ಮಹಾಸಭೆಯ ಕೋರಂ ಅನ್ನು ನಿಯಮಿಸುವುದು;

(8) ಭಾರತೀಯ ರಿಸರ್ವ್ ಬ್ಯಾಂಕಿನ ಶಿಫಾರಸ್ಸುಗಳ ಅನ್ವಯ ನಗರ ಬ್ಯಾಂಕುಗಳಲ್ಲಿನ ವೃತ್ತಿಪರ ನಿರ್ದೇಶಕರುಗಳ ವಿದ್ಯಾರ್ಹತೆಯನ್ನು ನಿಯಮಿಸುವುದು;

(9) ಸಹಕಾರ ಸಂಘಗಳ ಚುನಾವಣಾ ಪ್ರಕ್ರಿಯೆಗಳನ್ನು ಸರಳಗೊಳಿಸುವುದು;

(10) ಸಹಕಾರ ಸಂಘಗಳ ನಿರ್ದೇಶಕರು ಮತ್ತು ಪದಾಧಿಕಾರಿಗಳ ರಾಜೀನಾಮೆಗಾಗಿ ಉಪಬಂಧಗಳನ್ನು ಕಲ್ಪಿಸುವುದು;

(11) ನಗರ ಸಹಕಾರ ಬ್ಯಾಂಕುಗಳಿಂದ ಕರ್ನಾಟಕ ರಾಜ್ಯ ಸಹಕಾರ ನಗರ ಬ್ಯಾಂಕುಗಳ ಫೆಡರೇಷನ್‌ಗೆ ನಿವ್ವಳ ಲಾಭದ ಶೇಕಡ ಒಂದನ್ನು ಕೊಡುಗೆ ನೀಡುವುದು;

(12) ಸಹಕಾರ ಸಂಘಗಳಲ್ಲಿ ಮರು ಲೆಕ್ಕಪರಿಶೋಧನೆ ಮತ್ತು ಮರು ಸತ್ಯಾಪನೆಗಳಿಗೆ ಉಪಬಂಧ ಕಲ್ಪಿಸುವುದು;

(13) ಸಹಕಾರ ಸಂಘಗಳ ಚುನಾವಣಾ ವಿವಾಧಗಳನ್ನು ನ್ಯಾಯಿಕ ಸ್ವರೂಪದವುಗಳನ್ನಾಗಿ ಮಾಡುವುದು;

(14) ಕೃಷಿ ಕ್ರೆಡಿಟ್ ರಚನೆಯಲ್ಲಿ ಆಡಳಿತವನ್ನು ಸುಧಾರಣೆ ಮಾಡುವುದು;

(15) ಸಹಕಾರ ಸಂಘಗಳಲ್ಲಿ ಸದಸ್ಯತ್ವವನ್ನು ನಿರಾಕರಿಸಿದಾಗ ಅಪೀಲನ್ನು ಸಲ್ಲಿಸಲು ಉಪಬಂಧ ಕಲ್ಪಿಸುವುದು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

| | |
|---|---|
| **ಖಂಡ:3** | 12ನೇ ಪ್ರಕರಣದ (5)ನೇ ಉಪಪ್ರಕರಣವು ಪ್ರಸ್ತಾವಿತ ತಿದ್ದುಪಡಿಯನ್ನು ಮಾಡಲು ಸಹಕಾರ ಸಂಘಕ್ಕೆ ನಿರ್ದೇಶನವನ್ನು ನೀಡಲು ಸಹಕಾರ ಸಂಘದ ರಿಜಿಸ್ಟ್ರಾರನಿಗೆ ಅಧಿಕಾರವನ್ನು ನೀಡುತ್ತದೆ. |
| **ಖಂಡ:13** | 28ಸಿ ಪ್ರಕರಣದ (2)ನೇ ಉಪಪ್ರಕರಣದ (ಜಿ) ಖಂಡವು ಸಹಕಾರ ಸಂಘದ ಸಿಬ್ಬಂದಿಗಳ ವೃಂದಬಲ ಮತ್ತು ವೇತನ ಶ್ರೇಣಿಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 22 :** | ಪ್ರತಿಯೋಜಿಸಲು ಉದ್ದೇಶಿಸಲಾದ 39ಎಎ ಪ್ರಕರಣದ (4)ನೇ ಉಪಪ್ರಕರಣವು, ಸಹಕಾರ ಚುನಾವಣಾ ಪ್ರಾಧಿಕಾರದ ಕಾರ್ಯದರ್ಶಿಯ ಪದಾವಧಿಯನ್ನು ನಿಯಮಿಸುವ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಹೆಚ್.ಎಸ್. ಮಹಾದೇವ ಪ್ರಸಾದ್**
ಸಹಕಾರ ಮತ್ತು ಸಕ್ಕರೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ**

**(1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11 ) ಉದ್ಧೃತ ಭಾಗ**

Xxx xxx

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

**(ಎ-2-1) ಹಿಂದುಳಿದ ವರ್ಗಗಳು, ಎಂದರೆ:-** ಕಾಲಕಾಲಕ್ಕೆ ಸರ್ಕಾರವು ಹಿಂದುಳಿದ ವರ್ಗಗಳು ಎಂದು ವರ್ಗೀಕರಣ ಮಾಡಬಹುದಾದ ಮತ್ತು ಅಧಿಸೂಚಿಸಬಹುದಾದ ನಾಗರೀಕರ ಅಂಥ ವರ್ಗ ಅಥವಾ ವರ್ಗಗಳು.

Xxx xxx

**"**(ಬಿ-5) 'ಸಹಕಾರಿ ಚುನಾವಣಾ ಆಯೋಗ' ಎಂದರೆ, 39 ಎಎ ಪ್ರಕರಣದ ಅಡಿಯಲ್ಲಿ ರಚಿತವಾದ ಸಹಕಾರಿ ಚುನಾವಣಾ ಆಯೋಗ**"**,

Xxx xxx

(ಇ-1) "ಸಾಲ ನೀಡುವ ಏಜೆನ್ಸಿ" ಎಂದರೆ ಕರ್ನಾಟಕ ಕೃಷಿ ಸಾಲ ನೀಡಿಕೆ ಕಾರ್ಯಾಚರಣೆಗಳು ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ ಪರಿಭಾಷಿಸಲಾದ ಸಾಲನೀಡುವ ಏಜೆನ್ಸಿ; ಮತ್ತು ಇದರಲ್ಲಿ ಸಹಕಾರ ಸಂಘಕ್ಕೆ ಹಣಕಾಸು ನೆರವು ನೀಡುವ ಮತ್ತು ರಾಜ್ಯ ಸರ್ಕಾರವು ಕಾಲದಿಂದ ಕಾಲಕ್ಕೆ ಅಧಿಸೂಚಿಸುವ ಯಾವುದೇ ಇತರೆ ನಿಕಾಯ ಅಥವಾ ನಿಗಮ ಅಥವಾ ಹಣಕಾಸು ಸಂಸ್ಥೆ ಸೇರುತ್ತದೆ;

Xxx xxx

(ಎಫ್-2) **'ರಾಷ್ಟ್ರೀಯ ಬ್ಯಾಂಕ್'** ಎಂದರೆ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ರಾಷ್ಟ್ರೀಯ ಬ್ಯಾಂಕ್ ಅಧಿನಿಯಮ, 1981 ರ (1981ರ ಕೇಂದ್ರ ಅಧಿನಿಯಮ ಸಂಖ್ಯೆ 61) **3ನೇ ಪ್ರಕರಣದ** ಅಡಿಯಲ್ಲಿ ಸ್ಥಾಪಿಸಲಾದ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ರಾಷ್ಟ್ರೀಯ ಬ್ಯಾಂಕ್."

Xxx xxx

(ಜಿ) 'ಪದಾಧಿಕಾರಿ' ಎಂದರೆ ಅಧ್ಯಕ್ಷ, ಉಪಾಧ್ಯಕ್ಷ, ಚುನಾಯಿತ ಕಾರ್ಯದರ್ಶಿ ಅಥವಾ ಖಜಾಂಚಿ, ಸಭಾಧ್ಯಕ್ಷ, ಉಪ ಸಭಾಧ್ಯಕ್ಷ, ಸಮಾಪಕ, ಆಡಳಿತಾಧಿಕಾರಿ, ವಿಶೇಷ ಅಧಿಕಾರಿ ಮತ್ತು ಇದು ಸಮಿತಿಯ ಸದಸ್ಯನನ್ನು ಅಥವಾ ಸಹಕಾರ ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟ ಯಾವುದೇ ಅಧಿಕಾರವನ್ನು ಚಲಾಯಿಸಲು ಅಥವಾ ಯಾವುದೇ ಪ್ರಕಾರ್ಯವನ್ನು ನಿರ್ವಹಿಸಲು ಮತ್ತು ಸಂಘದ ವ್ಯವಹಾರಕ್ಕೆ ಸಂಬಂಧಪಡುವ ಕಾರ್ಯನೀತಿಗಳ ಬಗ್ಗೆ ನಿರ್ದೇಶನ ನೀಡಲು ಅಧಿಕಾರ ಹೊಂದಿರುವ ನೌಕರನಲ್ಲದ ಯಾರೇ ಇತರೆ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

Xxx xxx

**12. ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿ.-** (1) ಸಹಕಾರ ಸಂಘದ ಯಾವುದೇ ಉಪವಿಧಿಯ ತಿದ್ದುಪಡಿಯು, ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ಹೊರತು ಅದು ಸಿಂಧುವಾಗತಕ್ಕುದಲ್ಲ.

Xxx xxx

(4) ರಿಜಿಸ್ಟ್ರಾರನು ಸಹಕಾರ ಸಂಘದ ಉಪ-ವಿಧಿಗಳ ತಿದ್ದುಪಡಿಯನ್ನು ನೋಂದಾಯಿಸಲು ನಿರಾಕರಿಸುವಲ್ಲಿ, ಅವನು ನಿರಾಕರಣೆಯ ಆದೇಶವನ್ನು, ಅದರ ಕಾರಣಗಳ ಸಹಿತ ಸಂಘಕ್ಕೆ ಕಳುಹಿಸತಕ್ಕುದು.

Xxx xxx

**16. ಸದಸ್ಯರಾಗಬಹುದಾದ ವ್ಯಕ್ತಿಗಳು.**- Xxx xxx

(4) ಪ್ರತಿಯೊಂದು ಸಹಕಾರ ಸಂಘವು, ಅಂಥ ಸಂಘಕ್ಕೆ ಪ್ರವೇಶ ಕೋರುವ ಅರ್ಜಿಯು ತಲುಪಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಅಂಥ ವ್ಯಕ್ತಿಯನ್ನು ಸದಸ್ಯನಾಗಿ ಸೇರಿಸಿಕೊಳ್ಳತಕ್ಕುದು ಅಥವಾ ಸೇರಿಸಿಕೊಳ್ಳಲು ನಿರಾಕರಿಸತಕ್ಕುದು ಮತ್ತು ಅಂಥಯುಕ್ತ ಅವಧಿಯೊಳಗಾಗಿ ಪ್ರವೇಶ ನೀಡಿದ ಬಗ್ಗೆ ಅಥವಾ ನಿರಾಕರಣೆಯ ಬಗ್ಗೆ ಅರ್ಜಿದಾರನಿಗೆ ಲಿಖಿತ ಪತ್ರವನ್ನು ಕಳಿಸತಕ್ಕದ್ದು. ಸದಸ್ಯನಾಗಲು ಪ್ರವೇಶದ ಬಗ್ಗೆ ಅಂಥಯುಕ್ತ ಅವಧಿಯೊಳಗಾಗಿ ಅರ್ಜಿದಾರನಿಗೆ ಯಾವ ಸೂಚನೆಯೂ ತಲುಪದಿದ್ದರೆ, ಅವನ ಪ್ರವೇಶ ಕೋರುವ ಅರ್ಜಿಯನ್ನು 105ಎ ಪ್ರಕರಣದ ಉದ್ದೇಶಗಳಿಗಾಗಿ ಯುಕ್ತ ಅವಧಿಯ ಕೊನೆಯ ದಿನದಂದು ಆ ಸಹಕಾರ ಸಂಘವು ನಿರಾಕರಿಸಿತ್ತೆಂದು ಭಾವಿಸತಕ್ಕದ್ದು.

Xxx xxx

**17. ಸದಸ್ಯತ್ವಕ್ಕೆ ಅನರ್ಹತೆ.**-(1) ಯಾರೇ ವ್ಯಕ್ತಿಯು,-

Xxx xxx

(ಜಿ) ಅಂಥ ಸದಸ್ಯನಾಗಿ, ನಿರಂತರವಾಗಿ ಮೂರು ವರ್ಷಗಳ ಕಾಲ ಒಂದು ವರ್ಷದಲ್ಲಿ ಬೈಲಾದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಕನಿಷ್ಠ ವ್ಯವಹರಣೆಯನ್ನು ನಡೆಸಲು ಅಥವಾ ಕನಿಷ್ಠ ಸೇವೆಗಳನ್ನು ಅಥವಾ ಸೌಲಭ್ಯಗಳನ್ನು ಬಳಸಿಕೊಳ್ಳಲು ವಿಫಲನಾದರೆ;

- ಅವನು ಸದಸ್ಯನಾಗಿ ಪ್ರವೇಶ ಪಡೆಯಲು ಅರ್ಹನಾಗತಕ್ಕದ್ದಲ್ಲ.

Xxx xxx

**18. ನಾಮಮಾತ್ರದ ಅಥವಾ ಸಹವರ್ತಿ ಸದಸ್ಯರು.**- (1) 16ನೇಯ ಪ್ರಕರಣದಲ್ಲಿ ಏನೇ ಇದ್ದರೂ ಸಹಕಾರ ಸಂಘವು,-

Xxx xxx

(ಡಿ) ಸ್ವಸಹಾಯ ತಂಡವನ್ನು ನಾಮಮಾತ್ರ ಸದಸ್ಯರಾಗಿ

Xxx xxx

**20. ಸದಸ್ಯರ ಮತಗಳು.**- (1) Xxx xxx

(2) ಈ ಕೆಳಕಂಡ ವ್ಯಕ್ತಿಗಳು, ತಾವು ಸದಸ್ಯರಾಗಿರುವ ಸಹಕಾರ ಸಂಘದ ಸಭೆಯಲ್ಲಿ ಮತ ಚಲಾಯಿಸಲು ಹಕ್ಕನ್ನು ಹೊಂದಿರತಕ್ಕುದಲ್ಲ, ಎಂದರೆ:-

Xxx xxx

(ಎ-iii) ಅಂಥ ಸಭೆಯ ದಿನಾಂಕಕ್ಕೆ ಮುಂಚಿತವಾಗಿ ಹನ್ನೆರಡು ತಿಂಗಳ ಒಳಗೆ ಸಂಘದ ಸದಸ್ಯನಾದ ಒಬ್ಬ ವ್ಯಕ್ತಿ;

Xxx xxx

(ಎ-v) ಮೂರು ನಿರಂತರ ಸಹಕಾರ ವರ್ಷಗಳವರೆಗೆ ಉಪವಿಧಿಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಕನಿಷ್ಠ ಸೇವೆಗಳನ್ನು ಅಥವಾ ಸೌಲಭ್ಯಗಳನ್ನು ಬಳಸಿಕೊಳ್ಳಲು ತಪ್ಪಿದ ಒಬ್ಬ ಸದಸ್ಯ ಅಥವಾ ಪ್ರತಿನಿಧಿ".

Xxx xxx

(ಬಿ) (iv) ಯಾವ ಸಹಕಾರ ಸಂಘದ ಮೂಲ ಉದ್ದೇಶವು ಸಾಲವನ್ನು ನೀಡುವುದಾಗಿದೆಯೋ ಮತ್ತು ಸಭೆ ನಡೆದ ಸಹಕಾರ ವರ್ಷದ ನಿಕಟಪೂರ್ವ ಸಹಕಾರ ವರ್ಷದ ವಸೂಲಿಯು, ಒಟ್ಟು ತಗಾದೆಯ ಶೇಕಡಾ ಎಪ್ಪತ್ತೈದಕ್ಕಿಂತ ಕಡಿಮೆ ಆಗಿರುವುದೋ ಮತ್ತು ಸಂದರ್ಭಾನುಸಾರ ತಾನು ಋಣಿಯಾಗಿರುವ ಹಣಕಾಸು ಬ್ಯಾಂಕಿಗೆ ಅಥವಾ ಸಾಲ ನೀಡುವ ಏಜೆನ್ಸಿಗೆ:-

Xxx xxx

**21. ಮತ ಚಲಾಯಿಸುವ ರೀತಿ.**- (1) Xxx xxx

(3) ಯಾವುದೇ ಇತರ ಸಹಕಾರಿ ಸಂಘದ ಯಾವುದೇ ಸಭೆಯಲ್ಲಿ ಸಹಕಾರ ಸಂಘದ ಪರವಾಗಿ ಮತ ಚಲಾಯಿಸಲು (2)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ಸಹಕಾರಿ ಸಂಘದ ಸಮಿತಿಯಿಂದ ಒಮ್ಮೆ ನಾಮನಿರ್ದೇಶಿತನಾದ ಒಬ್ಬ ಸದಸ್ಯನನ್ನು, ಸರ್ವಸದಸ್ಯರ ಸಭೆಯಲ್ಲಿ ಹಾಜರಿರುವ ಮತ್ತು ಮತ ಚಲಾಯಿಸುವ ಸದಸ್ಯರ ಬಹುಮತದಿಂದ ಅಂಗೀಕರಿಸಿದ ಠರಾವಿನ ಹೊರತು, ಬದಲಾಯಿಸತಕ್ಕುದಲ್ಲ.

Xxx xxx

**27. ವಾರ್ಷಿಕ ಮಹಾ ಸಭೆ.**- (1) ಪ್ರತಿಯೊಂದು ಸಹಕಾರ ಸಂಘವು,-

(ಎ) Xxx xxx

(ಎನ್-6) ವಸೂಲಿಯಾಗದವನೆಂದು ಪರಿಗಣಿಸಲಾದ ವಸೂಲಾಗದ ಋಣಗಳ ಬಗ್ಗೆ ತೀರ್ಮಾನ;

Xxx xxx

(4) ಮಹಾಸಭೆಗೆ ಕೋರಂ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು, ಆದರೆ ಸಭೆಯಲ್ಲಿ ಮತ ನೀಡಲು ಅರ್ಹತೆ ಹೊಂದಿರುವ ಸದಸ್ಯರ ಶೇಕಡಾ ಇಪ್ಪತ್ತಕ್ಕಿಂತ ಕಡಿಮೆ ಇರತಕ್ಕದಲ್ಲ;

ಪರಂತು, ಪ್ರತಿನಿಧಿ ಮಹಾಸಭೆಗಾಗಿನ ಕೋರಂ, ಸಭೆಯಲ್ಲಿ ಮತ ನೀಡಲು ಅರ್ಹತೆ ಹೊಂದಿರುವ ಪ್ರತಿನಿಧಿಗಳ ಶೇಕಡಾ ಅರವತ್ತಕ್ಕಿಂತ ಕಡಿಮೆ ಇರತಕ್ಕದಲ್ಲ."

**28ಎ. ಸಹಕಾರ ಸಂಘಗಳ ವ್ಯವಸ್ಥಾಪನೆಯು ಸಮಿತಿಯಲ್ಲಿ ನಿಹಿತವಾಗಿರುವುದು.–**

Xxx xxx

(2) ಸಹಕಾರ ಸಂಘದ ಸಮಿತಿಯು ಸರ್ಕಾರದಿಂದ ನಾಮನಿರ್ದೇಶಿತರಾದ ವ್ಯಕ್ತಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕರನ್ನು ಹೊರತುಪಡಿಸಿ ಒಂಭತ್ತಕ್ಕಿಂತ ಕಡಿಮೆ ಇಲ್ಲದ ಆದರೆ ಕೆಳಗೆ ನಿರ್ದಿಷ್ಟಪಡಿಸಿದಷ್ಟು ಸಂಖ್ಯೆಗಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕುದು, ಎಂದರೆ:–

(i) ಪ್ರಾಥಮಿಕ ಸಂಘದ ಮತ್ತು ಸೆಕೆಂಡರಿ ಸಂಘದ ಕಾರ್ಯಾಚರಣೆ ಪ್ರದೇಶ ವ್ಯಾಪ್ತಿಯು–

Xxx xxx

(3) ಪ್ರತಿ ಪ್ರಾಥಮಿಕ ಸಂಘದ ಸಮಿತಿಯಲ್ಲಿ:– Xxx xxx

(iii) ಒಂದು ಸ್ಥಾನವನ್ನು ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗಳ ಪರವಾಗಿ ಚುನಾವಣೆಯ ಮೂಲಕ ಭರ್ತಿ ಮಾಡುವುದಕ್ಕಾಗಿ;

– ಮೀಸಲಿಡತಕ್ಕದ್ದು:

Xxx xxx

(4) 29ಎ ಮತ್ತು 39ಎ ಪ್ರಕರಣದ ಉಪಬಂಧಗಳಿಗೊಳಪಟ್ಟು, ಸಮಿತಿಯ ಸದಸ್ಯರ ಅಧಿಕಾರದ ಅವಧಿಯು ಐದು ಸಹಕಾರ ವರ್ಷಗಳಾಗಿರತಕ್ಕುದು ಮತ್ತು ಸದರಿ ಅವಧಿಯು ಮುಕ್ತಾಯವಾದ ದಿನಾಂಕದಂದು ಸಮಿತಿಯ ಅಂಥ ಸದಸ್ಯರು ಪದವನ್ನು ತೆರವುಗೊಳಿಸಿದ್ದಾರೆಂದು ಭಾವಿಸತಕ್ಕುದು:

ಪರಂತು, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1997 ಪ್ರಾರಂಭವಾಗುವುದಕ್ಕೆ ಮೊದಲು, ಅಂಥ ಸಂಘದ ಉಪ-ವಿಧಿಗಳಿಗನುಸಾರವಾಗಿ ಯಾವುದೇ ಸಹಕಾರ ಸಂಘದ ಸಮಿತಿಗೆ ಈಗಾಗಲೇ ಚುನಾವಣೆ ನಡೆದಿದ್ದರೆ, ಅಂಥ ಸಹಕಾರ ಸಂಘದ ಸಮಿತಿಯ ಪದಾವಧಿಯು, ಅಂಥ ಚುನಾವಣೆ ನಡೆದ ಸಹಕಾರ ವರ್ಷವೂ ಸೇರಿದಂತೆ ಮೂರು ವರ್ಷಗಳಾಗಿರತಕ್ಕುದು.

Xxx xxx

"(4ಎ) ಸಹಕಾರಿ ಸಂಘಗಳ ಮಂಡಳಿಯು, ಬ್ಯಾಂಕಿಂಗ್, ವ್ಯವಸ್ಥಾಪನೆ, ಹಣಕಾಸು ಕ್ಷೇತ್ರಗಳಲ್ಲಿ ಅನುಭವವನ್ನು ಹೊಂದಿರುವವರನ್ನು ಸಹ ಸದಸ್ಯರನ್ನಾಗಿ ನೇಮಕ ಮಾಡಿಕೊಳ್ಳಬಹುದು ಅಥವಾ ಸಹಕಾರ ಸಂಘವು ಕೈಗೊಳ್ಳಬೇಕಾದ ಉದ್ದೇಶಗಳು ಮತ್ತು ಚಟುವಟಿಕೆಗಳಿಗೆ ಸಂಬಂಧಿಸಿದ ಯಾವುದೇ ಇತರ ಕ್ಷೇತ್ರದಲ್ಲಿ ಪರಿಣತಿಯನ್ನು ಹೊಂದಿರುವ ವ್ಯಕ್ತಿಗಳು ಸದಸ್ಯರಾಗಿರಬೇಕು;

ಪರಂತು, ಹಾಗೆ ಸಹ ಸದಸ್ಯರನ್ನಾಗಿ ನೇಮಕ ಮಾಡಿಕೊಂಡು ಸದಸ್ಯರ ಸಂಖ್ಯೆಯು (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಗರಿಷ್ಠ ಸಂಖ್ಯೆಗೆ ಹೆಚ್ಚುವರಿಯಾಗಿ ಇಬ್ಬರನ್ನು ಮೀರತಕ್ಕದಲ್ಲ:

ಮತ್ತು ಪರಂತು, ಹಾಗೆ ಸಹ ಸದಸ್ಯರಾದಂಥವರು, ಅಂಥ ಸದಸ್ಯರಾಗಿ ಅವರ ಸಾಮರ್ಥ್ಯದಲ್ಲಿ ಸಹಕಾರಿ ಸಂಘಗಳ ಯಾವುದೇ ಚುನಾವಣೆಯಲ್ಲಿ ಮತದಾನ ಮಾಡುವ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಮಂಡಳಿಯ ಪದಾಧಿಕಾರಿಗಳಾಗಿ ಚುನಾಯಿತರಾಗಲು ಅರ್ಹರಾಗಿರತಕ್ಕದ್ದಲ್ಲ:

ಅಲ್ಲದೆ ಪರಂತು ಮೂವರು ಸದಸ್ಯರನ್ನು ಮೀರದ ಕಾರ್ಯನಿರ್ವಹಣಾ ನಿರ್ದೇಶಕರುಗಳು ಉಪವಿಧಿಗಳಿಗನುಸಾರವಾಗಿ ಮಂಡಳಿಯ ಸದಸ್ಯರಾಗಿರತಕ್ಕದ್ದು ಮತ್ತು ಅಂಥ ಸದಸ್ಯರುಗಳನ್ನು, (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ನಿರ್ದೇಶಕರುಗಳ ಒಟ್ಟು ಸಂಖ್ಯೆಯ ಉದ್ದೇಶಕ್ಕಾಗಿ ಹೊರತುಪಡಿಸತಕ್ಕದ್ದು.

Xxx xxx

(4ಬಿ)–(1) ರಾಜ್ಯ ಸರ್ಕಾರವು, ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಘದ ಮಂಡಳಿಯನ್ನು ಹೊರತುಪಡಿಸಿ ಪ್ರತಿಯೊಂದು ನೆರವು ಪಡೆದ ಸಂಘದ ಮಂಡಳಿಗೆ ತನ್ನ ಪ್ರತಿನಿಧಿಯಾಗಿ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡಬಹುದು.

Xxx xxx

**28ಬಿ. ಸಮಿತಿಯು ಚುನಾವಣೆಗೆ ವ್ಯವಸ್ಥೆ ಮಾಡಬೇಕು.**– (1) ಸಮಿತಿಯು ಅಧಿನಿಯಮ, ನಿಯಮಗಳು, ಮತ್ತು ಉಪವಿಧಿಗಳಿಗನುಸಾರವಾಗಿ, ಮುಂದಿನ ಸಮಿತಿಯ ಸದಸ್ಯರ ಚುನಾವಣೆಗೆ ವ್ಯವಸ್ಥೆಯನ್ನು ಮಾಡತಕ್ಕುದು.

Xxx xxx

**28ಸಿ. ಮಂಡಲಿಯ ಅಧಿಕಾರಗಳು ಮತ್ತು ಕರ್ತವ್ಯಗಳು.**– (1) Xxx xxx

(2) ಈ ಹಿಂದೆ ಹೇಳಿದ ಸಾಮಾನ್ಯನ್ವಯಕ್ಕೆ ಬಾಧಕವಾಗದಂತೆ, ಅಂಥ ಅಧಿಕಾರಗಳು ಮತ್ತು ಕರ್ತವ್ಯಗಳು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು:–

Xxx xxx

(ಇ) ಅಧ್ಯಕ್ಷರನ್ನು ಮತ್ತು ಅಂಥ ಇತರ ಪದಾಧಿಕಾರಿಗಳನ್ನು ಚುನಾಯಿಸುವುದಕ್ಕೆ;

Xxx xxx

(ಜಿ) ಸಂಘದ ಸಿಬ್ಬಂದಿಯ ವೃಂದಬಲವನ್ನು ಮತ್ತು ಪ್ರತಿಯೊಬ್ಬ ಸಿಬ್ಬಂದಿಗೆ ಅನ್ವಯವಾಗುವ ಅರ್ಹತೆಗಳು, ವೇತನಶ್ರೇಣಿಗಳು ಮತ್ತು ಇತರ ಭತ್ಯೆಗಳು ಹಾಗೂ ಸಿಬ್ಬಂದಿಗಳ ಇತರ ಸೇವಾ ಷರತ್ತುಗಳನ್ನು ನಿರ್ಧರಿಸುವುದು;

Xxx xxx

**29ಬಿ. ಸದಸ್ಯನ ರಾಜೀನಾಮೆ.**-ನಾಮನಿರ್ದೇಶಿತ ಸದಸ್ಯನನ್ನು ಹೊರತುಪಡಿಸಿ, ಸಮಿತಿಯ ಸದಸ್ಯನು ತನ್ನ ಸದಸ್ಯತ್ವಕ್ಕೆ ತಾನು ಸಹಿ ಹಾಕಿದ ಪತ್ರದ ಮೂಲಕ ರಾಜೀನಾಮೆಯನ್ನು ಮುಖ್ಯ ಕಾರ್ಯನಿರ್ವಾಹಕರಿಗೆ ಕೊಡಬಹುದು ಮತ್ತು ಹದಿನೈದು ದಿನಗಳೊಳಗೆ ತಾನು ಸಹಿ ಹಾಕಿದ ಪತ್ರದ ಮೂಲಕ ಮುಖ್ಯ ಕಾರ್ಯನಿರ್ವಾಹಕರಿಗೆ ತಲುಪಿಸಿರುವ ಅಂತಹ ರಾಜೀನಾಮೆಯನ್ನು ಅವನು ವಾಪಸ್ಸು ಪಡೆದ ಹೊರತು ಹಾಗೆ ತಲುಪಿಸಿದ ದಿನಾಂಕದಿಂದ ಸದರಿ ಹದಿನೈದು ದಿನಗಳ ಅವಧಿ ಮುಕ್ತಾಯವಾದ ದಿನಾಂಕದಂದು ಅವನ ಸ್ಥಾನವು ಖಾಲಿಯಾಗತಕ್ಕದು. ಅಂತಹ ಪತ್ರ ನೀಡಿದ ನಂತರ ಸಮಾವೇಶಗೊಳ್ಳುವ ಸಮಿತಿಯ ಸಭೆಯಲ್ಲಿ ಮುಖ್ಯ ಕಾರ್ಯನಿರ್ವಾಹಕನು ರಾಜೀನಾಮೆ ಪತ್ರವನ್ನು ಇಡತಕ್ಕದ್ದು.

Xxx xxx

**29ಸಿ. ಸಮಿತಿಯ ಸದಸ್ಯತ್ವಕ್ಕೆ ಅನರ್ಹತೆಗಳು.**- (1) ಯಾರೇ ವ್ಯಕ್ತಿಯು ಯಾವುದೇ ಸಹಕಾರ ಸಂಘದ ಸಮಿತಿಯ ಸದಸ್ಯನಾಗಿ ಚುನಾಯಿತನಾಗಲು, ಅಥವಾ ನೇಮಕಗೊಳ್ಳಲು ಅಥವಾ ಮುಂದುವರಿಯಲು,-

(ಎ) Xxx xxx

(ಒ) ಅವನು ಒಂದು ಸಹಕಾರ ಸಂಘದ ಪ್ರತಿನಿಧಿಯಾಗಿ ಒಂದು ಜಿಲ್ಲಾ ಕೇಂದ್ರ ಸಂಘದ ಅಥವಾ ಒಂದು ಒಕ್ಕೂಟ ಸಂಘದ ಅಥವಾ ಒಂದು ಅಪೆಕ್ಸ್ ಸಂಘದ ಸಮಿತಿಯ ಸದಸ್ಯನಾಗಿದ್ದರೆ; ಮತ್ತು,-

(i) ಅವನು ಪ್ರತಿನಿಧಿಸುವ ಪ್ರಾಥಮಿಕ ಅಥವಾ ಸೆಕೆಂಡರಿ ಸಂಘದ ಸದಸ್ಯತ್ವವು ಸಮಾಪ್ತಿಗೊಂಡರೆ; ಅಥವಾ

(ii) ಆತನನ್ನು ಪ್ರತಿನಿಧಿಯಾಗಿ ನಾಮನಿರ್ದೇಶನ ಮಾಡಿದ ಸಂಘವು ಆತನ ನಾಮನಿರ್ದೇಶನವನ್ನು ಹಿಂತೆಗೆದುಕೊಂಡರೆ; ಅಥವಾ

(iii) ಆತನು ಸದಸ್ಯನಾಗಿರುವ ಸಂಘದ ಸಮಿತಿಯನ್ನು 30ನೇ ಪ್ರಕರಣದ ಅಡಿಯಲ್ಲಿ ರದ್ದುಗೊಳಿಸಿದರೆ ಅಥವಾ 31ನೇ ಪ್ರಕರಣದ ಅಡಿಯಲ್ಲಿ ವಿಶೇಷಾಧಿಕಾರಿಯನ್ನು ನೇಮಕಗೊಳಿಸಿದರೆ;

(iv) ಆತನು ಪ್ರತಿನಿಧಿಸುತ್ತಿರುವ ಸಂಘವು ಸಮಾಪನಗೊಂಡರೆ.

Xxx xxx

(8) ಸಹಕಾರ ಸಂಘದ ಸಮಿತಿಯ ಯಾರೇ ಸದಸ್ಯನು ಅವನ ಅಧಿಕಾರ ಅವಧಿಯಲ್ಲಿ,-

(ಎ) Xxx xxx

(ಡಿ) ಅವನು ತನ್ನ ಕರ್ತವ್ಯಗಳನ್ನು ತೃಪ್ತಿಕರವಾಗಿ ನಿರ್ವಹಿಸುತ್ತಿಲ್ಲದಿದ್ದರೆ, ರಿಜಿಸ್ಟ್ರಾರನು ತನಗೆ ಬಂದ ವರದಿಯ ಮೇರೆಗೆ ಅಥವಾ ಅನ್ಯಥಾ ಅಂತಹ ಸದಸ್ಯನನ್ನು ಆದೇಶದ ಮೂಲಕ ತೆಗೆದುಹಾಕಬಹುದು ಮತ್ತು ಈ ಉಪ-ಪ್ರಕರಣದ (ಎ), (ಬಿ), (ಸಿ) ಮತ್ತು (ಡಿ) ಖಂಡಗಳಲ್ಲಿ ಹೇಳಿರುವ ವಿಷಯಗಳ ಬಗ್ಗೆ ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಐದು ವರ್ಷಗಳಿಗೆ ಮೀರದಂಥ ಅವಧಿಯವರೆಗೆ ಸಹಕಾರ ಸಂಘದ ಯಾವುದೇ ಪದವನ್ನು ಹೊಂದದಂತೆ ಅವನನ್ನು ಅನರ್ಹಗೊಳಿಸಬಹುದು:

Xxx xxx

**29ಇ. ಸಮಿತಿಯ ಸದಸ್ಯರ ಪದದಲ್ಲಿ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿಮಾಡುವುದು.**- ಸಹಕಾರ ಸಂಘದ ಸಮಿತಿಯ ಸದಸ್ಯರ ಪದದಲ್ಲಿ ಮರಣ, ರಾಜೀನಾಮೆ, ವಜಾಮಾಡುವಿಕೆ ಅಥವಾ ಇತರ ಕಾರಣದಿಂದ ಉಂಟಾಗುವ ಯಾವುದೇ ಖಾಲಿ ಸ್ಥಾನವನ್ನು ಅಂಥ ಸಂಘದ ಉಪ ವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಭರ್ತಿ ಮಾಡತಕ್ಕದು.

Xxx xxx

**29ಜಿ. ಮುಖ್ಯ ಕಾರ್ಯನಿರ್ವಾಹಕನ ನೇಮಕ.**- (1) ಪ್ರತಿ ಸಹಕಾರ ಸಂಘಕ್ಕೆ ಒಬ್ಬ ಮುಖ್ಯ ಕಾರ್ಯನಿರ್ವಾಹಕನು ಇರತಕ್ಕದು, ಅವನನ್ನು 128ಎ ಪ್ರಕರಣದ ಉಪಬಂಧಗಳಿಗೊಳಪಟ್ಟು ಸಂಘದಿಂದ ನೇಮಕ ಮಾಡತಕ್ಕದು ಮತ್ತು ವಜಾಗೊಳಿಸಬಹುದಾಗಿರತಕ್ಕದು:

Xxx xxx

**30. ಸಮಿತಿಯ ರದ್ದಿಯಾತಿ.**– (1) Xxx xxx

(2) Xxx xxx

(V) Xxx xxx

ಮತ್ತು ಪರಂತು, ಸಹಕಾರ ಸಂಘದ ಮಂಡಲಿಯ ರದ್ದಿಯಾತಿಯನ್ನು ಸಂದರ್ಭಾನುಸಾರ ಭಾರತದ ರಿಸರ್ವ್ ಬ್ಯಾಂಕ್‌ನೊಂದಿಗೆ/ರಾಷ್ಟ್ರೀಯ ಬ್ಯಾಂಕ್‌ನೊಂದಿಗೆ ಸಮಾಲೋಚಿಸಿದ ತರುವಾಯ ಮಾತ್ರವೇ ಮಾಡತಕ್ಕದ್ದು ಮತ್ತು ಬ್ಯಾಂಕಿಂಗ್ ವಿನಿಮಯ ಅಧಿನಿಯಮ, 1949ರ (AACS) ಉಪಬಂಧಗಳೂ ಸಹ ಅನ್ವಯವಾಗತಕ್ಕದ್ದು.

Xxx xxx

(6) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ರಿಜಿಸ್ಟ್ರಾರರು, ಸಹಕಾರ ಸಂಘದ ಸಂದರ್ಭದಲ್ಲಿ ಸಹಕಾರ ಬ್ಯಾಂಕಿನ ವ್ಯವಹಾರಗಳನ್ನು ಠೇವಣಿದಾರರ ಹಿತಾಸಕ್ತಿಗೆ ಬಾಧಕ ಉಂಟುಮಾಡುವ ರೀತಿಯಲ್ಲಿ ನಡೆಸುತ್ತಿರುವುದನ್ನು ತಡೆಗಟ್ಟಲು ಅಥವಾ ಸಹಕಾರ ಬ್ಯಾಂಕಿನ ಯುಕ್ತ ಆಡಳಿತವನ್ನು ಸಾಧಿಸುವುದಕ್ಕಾಗಿ ಭಾರತೀಯ ರಿಸರ್ವ್ ಬ್ಯಾಂಕ್ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಅಗತ್ಯಪಡಿಸಿದರೆ, ಲಿಖಿತ ಆದೇಶದ ಮೂಲಕ ಆ ಸಹಕಾರ ಬ್ಯಾಂಕಿನ ಮಂಡಲಿಯನ್ನು ತೆಗೆದುಹಾಕತಕ್ಕದ್ದು, ಮತ್ತು ಭಾರತದ ರಿಸರ್ವ್ ಬ್ಯಾಂಕ್ ನಿರ್ದಿಷ್ಟಪಡಿಸಬಹುದಾದಂತೆ ಒಂದು ವರ್ಷವನ್ನು ಮೀರದ ಅಂಥ ಅವಧಿಯವರೆಗೆ ಸಹಕಾರ ಬ್ಯಾಂಕಿನ ವ್ಯವಹಾರಗಳನ್ನು ನಿರ್ವಹಿಸಲು ಒಬ್ಬ ಆಡಳಿತಾಧಿಕಾರಿಯನ್ನು ನೇಮಕ ಮಾಡತಕ್ಕದ್ದು.

Xxx xxx

**31. ರಿಜಿಸ್ಟ್ರಾರ್‌ನಿಂದ ವಿಶೇಷಾಧಿಕಾರಿಯ ನೇಮಕಾತಿ.– (1)** Xxx xxx

(5) ವಿಶೇಷಾಧಿಕಾರಿಯು, ತನ್ನ ಅಧಿಕಾರಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸಂಘದ ಹೊಸ ಸಮಿತಿಯ ರಚನೆಗೆ ಅದರ ಉಪವಿಧಿಗಳಿಗನುಸಾರವಾಗಿ ವ್ಯವಸ್ಥೆ ಮಾಡತಕ್ಕದ್ದು.

Xxx xxx

**"39ಎ ಚುನಾವಣೆಗಳನ್ನು ನಡೆಸುವುದು.–** (1) ಯಾವುದೇ ಆಕಸ್ಮಿಕ ಖಾಲಿ ಸ್ಥಾನವೂ ಸೇರಿದಂತೆ ಒಟ್ಟು ಒಂದು ಸಹಕಾರ ಸಂಘದ ಮಂಡಳಿಯ ಸದಸ್ಯರ ಪ್ರತಿಯೊಂದು ಮಹಾ ಚುನಾವಣೆಯನ್ನು ಮತ್ತು ಪದಾಧಿಕಾರಿಗಳ ಚುನಾವಣೆಯನ್ನು, ಅನ್ವಯವಾಗಬಹುದಾದ ಮಟ್ಟಿಗೆ, ಸಹಕಾರಿ ಚುನಾವಣಾ ಆಯೋಗದ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಡೆಸತಕ್ಕದ್ದು.

(2) ಸಹಕಾರ ಸಂಘಗಳ ಮಂಡಲಿಯ ಸದಸ್ಯರ ಮಹಾ ಚುನಾವಣೆಗಳು, ಈ ಮುಂದಿನಂತೆ, ನಾಲ್ಕು ಹಂತಗಳಲ್ಲಿ ನಡೆಯತಕ್ಕದ್ದು.

(ಎ) ಮೊದಲ ಹಂತದಲ್ಲಿ ಪ್ರಾಥಮಿಕ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ ಚುನಾವಣೆಗಳು ನಡೆಯತಕ್ಕದ್ದು;

(ಬಿ) ಎರಡನೇ ಹಂತದಲ್ಲಿ, ಸೆಕೆಂಡರಿ ಸಂಘಗಳಿಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿನ ಚುನಾವಣಾ ಪ್ರಕ್ರಿಯೆಯು ಪ್ರಾಥಮಿಕ ಸಂಘಗಳ ಚುನಾವಣೆಗಳ ಪೂರ್ಣಗೊಂಡ ಹದಿನೈದು ದಿನಗಳ ತರುವಾಯ ಪ್ರಾರಂಭವಾಗತಕ್ಕದ್ದು;

(ಸಿ) ಮೂರನೇ ಹಂತದಲ್ಲಿ, ಫೆಡರಲ್ ಸಂಘಗಳ ಚುನಾವಣೆಗಳನ್ನು ನಡೆಸುವುದಕ್ಕಾಗಿನ ಚುನಾವಣಾ ಪ್ರಕ್ರಿಯೆಯು ಸೆಕೆಂಡರಿ ಸಂಘಗಳ ಚುನಾವಣೆಗಳು ಪೂರ್ಣಗೊಂಡ ಮೂವತ್ತು ದಿನಗಳ ತರುವಾಯ ಪ್ರಾರಂಭವಾಗತಕ್ಕದ್ದು.

(ಡಿ) ನಾಲ್ಕನೇ ಹಂತದಲ್ಲಿ, ಅಪೆಕ್ಸ್ ಸಂಘಗಳಿಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿನ ಚುನಾವಣಾ ಪ್ರಕ್ರಿಯೆಯು ಫೆಡರಲ್ ಸಂಘಗಳ ಚುನಾವಣೆಗಳು ಪೂರ್ಣಗೊಂಡ ಮೂವತ್ತು ದಿನಗಳ ತರುವಾಯ ಪ್ರಾರಂಭವಾಗತಕ್ಕದ್ದು;

ಪರಂತು, ಸಹಕಾರಿ ಚುನಾವಣಾ ಆಯೋಗವು ಮತದಾರರ ಪಟ್ಟಿಯ ತಯಾರಿಕೆಗಾಗಿ ಮತ್ತು ಚುನಾವಣೆಗಳನ್ನು ನಡೆಸುವುದಕ್ಕಾಗಿ ಪೂರ್ವಸಿದ್ದತಾ ಕಾರ್ಯವನ್ನು ಒಂದು ಸಹಕಾರ ಸಂಘದ ಮಂಡಳಿಯ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಕೊನೆಯ ಆರು ತಿಂಗಳ ಅವಧಿಯಲ್ಲಿ ಪ್ರಾರಂಭಿಸಬಹುದು.

(3) ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಯಾವುದೇ ಸಹಕಾರ ಸಂಘದ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, 2013ರ ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ನಡೆಯಬೇಕಾಗಿರುವ ಮಂಡಳಿಗಳ ಚುನಾವಣೆಗಳನ್ನು ಮತ್ತು ತತ್ಪರಿಣಾಮದ ಪದಾಧಿಕಾರಿಗಳ ಚುನಾವಣೆಗಳನ್ನು,–

(i) ಪ್ರಾಥಮಿಕ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ 2013ರ ಸೆಪ್ಟೆಂಬರ್ ತಿಂಗಳ ಮೂವತ್ತನೇ ತಾರೀಖಿಗೆ ಮುಂಚೆ;

(ii) ಸೆಕೆಂಡರಿ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ, 2013ರ ಅಕ್ಟೋಬರ್ ಮೂವತ್ತೊಂದನೇ ತಾರೀಖಿಗೆ ಮುಂಚೆ;

(iii) ಫೆಡರಲ್ ಸಂಘಗಳಿಗೆ ಸಂಬಂಧಪಟ್ಟಂತೆ 2013ರ ನವೆಂಬರ್ ಮೂವತ್ತನೇ ತಾರೀಖಿಗೆ ಮುಂಚೆ;

(iv) ಅಪೆಕ್ಸ್ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ 2013ರ ಡಿಸೆಂಬರ್ ಮೂವತ್ತೊಂದನೇ ತಾರೀಖಿಗೆ ಮುಂಚೆ,

– ನಡೆಸತಕ್ಕದ್ದು:

ಪರಂತು, ಅಂಥ ಎಲ್ಲ ಸಹಕಾರ ಸಂಘಗಳ ಪದಧಾರಿ ಮಂಡಳಿಗಳು, ಮೇಲ್ಕಂಡಂತೆ ಚುನಾವಣೆಗಳನ್ನು ನಡೆಸುವವರೆಗೆ ತಮ್ಮ ತಮ್ಮ ಪದಗಳಲ್ಲಿ ಮುಂದುವರೆಯತಕ್ಕದ್ದು.

Xxx xxx

**39ಎಎ. ಸಹಕಾರಿ ಸಂಘದ ಚುನಾವಣಾ ಆಯೋಗ.–** (1) Xxx xxx

(2) ರಾಜ್ಯದಲ್ಲಿನ ಸಹಕಾರ ಸಂಘಗಳಿಗೆ ನಡೆಯುವ ಎಲ್ಲ ಚುನಾವಣೆಗಳಿಗೆ ಮತದಾರರ ಪಟ್ಟಿಗಳನ್ನು ತಯಾರಿಸುವ ಮತ್ತು ಚುನಾವಣೆಗಳನ್ನು ನಡೆಸುವ ಕಾರ್ಯದ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣವು ಸಹಕಾರಿ ಚುನಾವಣಾ ಆಯೋಗದಲ್ಲಿ ನಿಹಿತವಾಗಿರತಕ್ಕದ್ದು.

(3) ರಾಜ್ಯಪಾಲರು, ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿಯ ದರ್ಜೆಯ ಒಬ್ಬ ಅಧಿಕಾರಿಯಾಗಿರುವ ಅಥವಾ ಆಗಿದ್ದಿರುವ ಒಬ್ಬ ವ್ಯಕ್ತಿಯನ್ನು, ಮುಖ್ಯ ಮಂತ್ರಿಯವರ ಶಿಫಾರಸ್ಸಿನ ಮೇಲೆ ಸಹಕಾರಿ ಚುನಾವಣಾ ಆಯುಕ್ತರೆಂದು ನೇಮಕ ಮಾಡತಕ್ಕದ್ದು ಮತ್ತು ಅಂಥ ಸಹಕಾರಿ ಚುನಾವಣಾ ಆಯುಕ್ತರು ಐದು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(4) ರಾಜ್ಯ ಸರ್ಕಾರವು, ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್ ದರ್ಜೆಯ ಒಬ್ಬ ಅಧಿಕಾರಿಯಾಗಿರುವ ಅಥವಾ ಆಗಿದ್ದಿರುವ ಒಬ್ಬ ವ್ಯಕ್ತಿಯನ್ನು ಸಹಕಾರಿ ಚುನಾವಣಾ ಆಯೋಗದ ಕಾರ್ಯದರ್ಶಿಯಾಗಿ ನೇಮಕ ಮಾಡತಕ್ಕದ್ದು.

Xxx xxx

(6) (8)ನೇ ಉಪಪ್ರಕರಣಕ್ಕೆ ಒಳಪಟ್ಟು, ಸಹಕಾರಿ ಚುನಾವಣಾ ಆಯುಕ್ತನನ್ನು, ಉಚ್ಚನ್ಯಾಯಾಲಯದ ನ್ಯಾಯಾಧೀಶರನ್ನು ತೆಗೆದು ಹಾಕುವಂಥದೇ ರೀತಿಯಲ್ಲಿ ಮತ್ತು ಅಂಥವೇ ಕಾರಣಗಳ ಮೇಲೆ ಹೊರತು, ಅವನ ಪದದಿಂದ ತೆಗೆದುಹಾಕತಕ್ಕದ್ದಲ್ಲ, ಮತ್ತು ಸಹಕಾರಿ ಚುನಾವಣಾ ಆಯುಕ್ತನ ಸೇವಾ ಷರತ್ತುಗಳನ್ನು ಆತನ ನೇಮಕಾತಿಯ ತರುವಾಯ ಆತನಿಗೆ ಅನಾನುಕೂಲಕರವಾಗುವಂತೆ ಬದಲಾಯಿಸತಕ್ಕದ್ದಲ್ಲ.

(7) ರಾಜ್ಯಪಾಲರು (6)ನೇ ಉಪಪ್ರಕರಣದ ಮೇರೆಗೆ ಯಾವ ಚುನಾವಣಾ ಆಯುಕ್ತರ ವಿರುದ್ಧ ವಿಚಾರಣೆ ಮಾಡಲು ಆದೇಶಿಸಲಾಗಿದೆಯೋ ಆ ಚುನಾವಣಾ ಆಯುಕ್ತರನ್ನು ಕಚೇರಿಗೆ ಹಾಜರಾಗುವುದರಿಂದ ನಿಷೇಧಿಸುವುದು ಅವಶ್ಯ ಎಂದು ಭಾವಿಸಿದ್ದರೆ, ಉಚ್ಚನ್ಯಾಯಾಲಯದ ನ್ಯಾಯಾಧೀಶರ ವರದಿಯನ್ನು ಸ್ವೀಕರಿಸಿದ ಮೇಲೆ ರಾಜ್ಯಪಾಲರು ಆದೇಶವನ್ನು ಹೊರಡಿಸುವವರೆಗೆ, ಪದದಿಂದ ಅಮಾನತುಗೊಳಿಸಬಹುದು

(8) (6)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಸಹಕಾರಿ ಚುನಾವಣಾ ಆಯುಕ್ತರು,–

(ಎ) ನಿರ್ಣೀತ ದಿವಾಳಿಯಾಗಿದ್ದರೆ; ಅಥವಾ

(ಬಿ) ರಾಜ್ಯಪಾಲರ ಅಭಿಪ್ರಾಯದಲ್ಲಿ, ನೈತಿಕ ಅಧ:ಪತನವನ್ನೊಳಗೊಂಡ ಅಪರಾಧದ ನಿರ್ಣೀತ ಅಪರಾಧಿಯಾಗಿದ್ದರೆ; ಅಥವಾ

(ಸಿ) ಅವನ ಪದಾವಧಿಯಲ್ಲಿ, ಅವನ ಪದದ ಕರ್ತವ್ಯದಿಂದ ಹೊರಗೆ ಹಣ ಸಂದಾಯವಾಗುವ ಉದ್ಯೋಗದಲ್ಲಿ ನಿರತನಾಗಿದ್ದರೆ;

(ಡಿ) ರಾಜ್ಯಪಾಲರ ಅಭಿಪ್ರಾಯದಲ್ಲಿ, ಅವನು ಮಾನಸಿಕ ಅಥವಾ ದೈಹಿಕ ದುರ್ಬಲತೆಯ ಕಾರಣದಿಂದಾಗಿ ಪದದಲ್ಲಿ ಮುಂದುವರೆಯಲು ಸೂಕ್ತನಾಗಿಲ್ಲದಿದ್ದರೆ; ಅಥವಾ

(ಇ) ಆತನು ಚುನಾವಣಾ ಆಯುಕ್ತನಾಗಿ ತನ್ನ ಪ್ರಕಾರ್ಯಗಳ ಮೇಲೆ ಬಾಧಕವನ್ನುಂಟುಮಾಡುವ ಸಂಭವವಿರುವಂಥ ಹಣಕಾಸು ಅಥವಾ ಇತರ ಹಿತಾಸಕ್ತಿಯನ್ನು ಹೊಂದಿದ್ದಾನೆಂದು, ರಾಜ್ಯಪಾಲರು ಅಭಿಪ್ರಾಯಪಟ್ಟರೆ, ಅವರು ಆದೇಶದ ಮೂಲಕ ಚುನಾವಣಾ ಆಯುಕ್ತನ್ನು ಪದದಿಂದ ತೆಗೆದು ಹಾಕಬಹುದು,

Xxx xxx

(10) ಸಹಕಾರಿ ಚುನಾವಣಾ ಆಯೋಗವು, ರಾಜ್ಯ ಸರ್ಕಾರದೊಂದಿಗೆ ಸಮಾಲೋಚನೆ, (2)ನೇ ಉಪಪ್ರಕರಣದ ಅಡಿಯಲ್ಲಿ ತನಗೆ ಪ್ರದತ್ತವಾಗಿರುವ ಪ್ರಕಾರ್ಯಗಳನ್ನು ನಿರ್ವಹಿಸಲು ಅಗತ್ಯವಾದ ಅಧಿಕಾರಿಗಳ ಮತ್ತು ಇತರ ನೌಕರರ ಸಂಖ್ಯೆಯನ್ನು ನಿರ್ಧರಿಸತಕ್ಕದ್ದು ಮತ್ತು ಅಂಥ ಅಧಿಕಾರಿಗಳು ಮತ್ತು ನೌಕರರ ಸೇವೆಗಳನ್ನು ಒದಗಿಸುವಂತೆ ರಾಜ್ಯ ಸರ್ಕಾರವನ್ನು ಅಗತ್ಯಪಡಿಸತಕ್ಕದ್ದು

(11) (2)ನೇ ಉಪಪ್ರಕರಣದ ಅಡಿಯಲ್ಲಿ ಸಹಕಾರಿ ಚುನಾವಣಾ ಆಯೋಗಕ್ಕೆ ಪ್ರದತ್ತವಾದ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅವಶ್ಯವಾಗಬಹುದಾದಷ್ಟು ಸಿಬ್ಬಂದಿಯನ್ನು ಸಹಕಾರಿ ಚುನಾವಣಾ ಆಯೋಗಕ್ಕೆ ರಾಜ್ಯ ಸರ್ಕಾರವು ಹಾಗೆ ಒದಗಿಸತಕ್ಕದ್ದು.

(12) ಸಹಕಾರಿ ಚುನಾವಣಾ ಆಯೋಗದ ಅಧಿಕಾರಿಗಳು ಮತ್ತು ನೌಕರರ ಸಂಬಳ, ಭತ್ಯೆಗಳು, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

Xxx xxx

(15) ಪ್ರತಿಯೊಂದು ಸಹಕಾರ ಸಂಘದ ಮಂಡಳಿಯು,–

(ಎ) ತನ್ನ ಪದಾವಧಿಯ ಮುಕ್ತಾಯದ ಬಗ್ಗೆ ಅಂಥ ಪದಾವಧಿಯು ಮುಕ್ತಾಯವಾಗುವ ದಿನಾಂಕಕ್ಕೆ ಕನಿಷ್ಠ ಆರು ತಿಂಗಳಿಗೆ ಮುಂಚೆ ಸಹಕಾರಿ ಚುನಾವಣಾ ಆಯೋಗಕ್ಕೆ ತಿಳಿಸತಕ್ಕದ್ದು;

(ಬಿ) ಸಹಕಾರಿ ಚುನಾವಣಾ ಆಯೋಗವು ನಿಯಮಿಸಬಹುದಾದಂಥ ಕ್ಯಾಲೆಂಡರ್ ಪ್ರಕಾರ ಆಯೋಗವು ಅಗತ್ಯಪಡಿಸಬಹುದಾದಂಥ ಪುಸ್ತಕಗಳು, ದಾಖಲೆಗಳು ಮತ್ತು ಮಾಹಿತಿಯನ್ನು ಒದಗಿಸತಕ್ಕದ್ದು; ಮತ್ತು

(ಸಿ) ಸುಗಮವಾಗಿ ಮತದಾರರ ಪಟ್ಟಿಗಳನ್ನು ತಯಾರಿಸುವುದಕ್ಕಾಗಿ ಮತ್ತು ಚುನಾವಣೆಗಳನ್ನು ನಡೆಸುವುದಕ್ಕಾಗಿ ಎಲ್ಲ ಅವಶ್ಯಕ ನೆರವು, ಸಹಾಯ ಮತ್ತು ಸಹಕಾರವನ್ನು ನೀಡತಕ್ಕದ್ದು.

Xxx xxx

**39ಇ. ಚುನಾವಣೆಗೆ ಸಂಬಂಧಿಸಿದಂತೆ ಪದೀಯ ಕರ್ತವ್ಯದ ಉಲ್ಲಂಘನೆಗಳು.**– (1) Xxx xxx

(2) (1)ನೇ ಉಪಪ್ರಕರಣದ ಮೇರೆಗೆ ದಂಡನೀಯವಾದ ಅಪರಾಧವು ಸಂಜ್ಞೇಯವಾಗಿರತಕ್ಕುದು.

(3) ಮೇಲೆ ಹೇಳಿರುವ ಯಾವುದೇ ಅಂಥ ಕೃತ್ಯಕ್ಕೆ ಅಥವಾ ಲೋಪಕ್ಕೆ ಸಂಬಂಧಪಟ್ಟಂತೆ ಹಾನಿ ಪರಿಹಾರಕ್ಕಾಗಿ ಯಾರೇ ಅಂಥ ವ್ಯಕ್ತಿಯ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡಲು ಅವಕಾಶವಿರತಕ್ಕುದಲ್ಲ.

Xxx xxx

**58. ನಿಧಿಗಳ ಹೂಡಿಕೆ.**– Xxx xxx

(ಇ) ರಿಜಿಸ್ಟ್ರಾರನಿಂದ ಅನುಮೋದಿತವಾದ ಯಾವುದೇ ಷೆಡ್ಯೂಲ್ಡ್ ಬ್ಯಾಂಕ್‌ನಲ್ಲಿ:

ಪರಂತು, ಸಹಕಾರ ಬ್ಯಾಂಕು ಅದರ ನಿಯತ ವ್ಯವಹಾರದ ನಿರ್ವಹಣೆಗಾಗಿ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನಲ್ಲಿ ಚಾಲ್ತಿ ಖಾತೆಯನ್ನು ತೆರೆಯಲು ಅಂಥ ಯಾವ ಅನುಮೋದನೆಯ ಅಗತ್ಯ ಇರತಕ್ಕುದಲ್ಲ.]

**63. ಲೆಕ್ಕ ಪರಿಶೋಧನೆ.**–(1) ಪ್ರತಿಯೊಂದು ಸಹಕಾರ ಸಂಘವು, ಸಹಕಾರಿ ಸಂಘದ ಲೆಕ್ಕಪರಿಶೋಧನೆ ನಿರ್ದೇಶಕರು ಅನುಮೋದಿಸಿದ ಲೆಕ್ಕಪರಿಶೋಧಕರ ಅಥವಾ ಲೆಕ್ಕ ಪರಿಶೋಧನಾ ಫರ್ಮುಗಳ ಪಟ್ಟಿಯಿಂದ ಸಹಕಾರಿ ಸಂಘದ ಸರ್ವಸದಸ್ಯರ ಸಭೆಯು ನೇಮಕ ಮಾಡುವ ಲೆಕ್ಕಪರಿಶೋಧಕನ ಅಥವಾ ಲೆಕ್ಕಪರಿಶೋಧನಾ ಫರ್ಮಿನ ಮೂಲಕ ಸಹಕಾರಿ ವರ್ಷದ ಮುಕ್ತಾಯದ ನಂತರ ಬರುವ ಸೆಪ್ಟೆಂಬರ್ ಮೊದಲ ದಿನಾಂಕಕ್ಕೆ ಮುಂಚೆ ಕನಿಷ್ಠ ಪಕ್ಷ ವರ್ಷಕ್ಕೊಮ್ಮೆಯಾದರೂ ತನ್ನ ಲೆಕ್ಕ ಪತ್ರಗಳನ್ನು ಲೆಕ್ಕ ಪರಿಶೋಧನೆ ಮಾಡಿಸತಕ್ಕದ್ದು.

ಮತ್ತೂ ಪರಂತು, ಸಹಕಾರಿ ಸಂಘದ ಲೆಕ್ಕ ಪರಿಶೋಧನಾ ನಿರ್ದೇಶಕರು, ಸಹಕಾರಿ ವರ್ಷದ ಮುಕ್ತಾಯದಿಂದ ಮೂವತ್ತು ದಿನಗಳೊಳಗೆ ಪ್ರತಿಯೊಂದು ಸಹಕಾರಿ ಸಂಘಕ್ಕೆ ಹತ್ತು ಸಂಖ್ಯೆಯನ್ನು ಮೀರದಂತೆ, ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧನಾ ಫರ್ಮುಗಳ ಪಟ್ಟಿಯನ್ನು ನೀಡತಕ್ಕದ್ದು.

Xxx xxx

(2) (1)ನೇ ಉಪಪ್ರಕರಣದ ಮೇರೆಗಿನ ಲೆಕ್ಕ ಪರಿಶೋಧನೆಯು, ಅವಧಿಮೀರಿದ ಋಣಗಳು ಯಾವುದಾದರೂ ಇದ್ದರೆ, ಅವುಗಳ ಪರೀಕ್ಷೆ, ನಗದು ಶಿಲ್ಕಿನ ಮತ್ತು ಭದ್ರತಾ ಪತ್ರಗಳ ಪರಿಶೀಲನೆ, ಆಸ್ತಿಗಳ ಮತ್ತು ಹೊಣೆಗಳ ಮೌಲ್ಯನಿಗದಿ ಮತ್ತು ಸಂಘದ ಕಾರ್ಯನಿರ್ವಹಣೆಯ ಮತ್ತು ನಿಯಮಿಸಲಾದ ಇತರ ವಿವರಗಳ ಪರೀಕ್ಷೆ ಇವುಗಳನ್ನು ಒಳಗೊಂಡಿರತಕ್ಕುದು.

Xxx xxx

(13)ಸಂಘದ ಲೆಕ್ಕಪತ್ರಗಳ ಪುನರ್ ಲೆಕ್ಕಪರಿಶೋಧನೆಯು ಅವಶ್ಯಕ ಅಥವಾ ಯುಕ್ತವೆಂದು ಸಹಕಾರಿ ಸಂಘವು ಸಲ್ಲಿಸಿರುವ ಅರ್ಜಿಯಿಂದ ಅಥವಾ ಅನ್ಯಥಾ ರೀತಿಯಿಂದ ರಾಜ್ಯ ಸರ್ಕಾರಕ್ಕೆ ಕಂಡುಬಂದಲ್ಲಿ, ರಾಜ್ಯ ಸರ್ಕಾರವು, ಆದೇಶದ ಮೂಲಕ ಅಂಥ ಪುನರ್ ಲೆಕ್ಕಪರಿಶೋಧನೆಗೆ ಅವಕಾಶವನ್ನು ಕಲ್ಪಿಸಬಹುದು ಮತ್ತು ಲೆಕ್ಕಪರಿಶೋಧನೆಗೆ ಅನ್ವಯವಾಗುವ ನಿಯಮಗಳೇ ಅಂಥ ಪುನರ್ ಲೆಕ್ಕಪರಿಶೋಧನೆಗೆ ಅವಕಾಶವನ್ನು ಕಲ್ಪಿಸಬಹುದು ಮತ್ತು ಲೆಕ್ಕಪರಿಶೋಧನೆಗೆ ಅನ್ವಯವಾಗುವ ನಿಯಮಗಳೇ ಅಂಥ ಪುನರ್ ಲೆಕ್ಕಪರಿಶೋಧನೆಗೂ ಅನ್ವಯವಾಗತಕ್ಕದ್ದು.

ಪರಂತು ನಿಯಮ ಲೆಕ್ಕಪರಿಶೋಧನೆಯ ಅವಧಿಯಲ್ಲಿ ಲೆಕ್ಕಪರಿಶೋದಕರಿಂದ ಅಥವಾ ಲೆಕ್ಕಪರಿಶೋಧನಾ ಸಂಸ್ಥೆಗಳಿಂದ ಪತ್ತೆಹಚ್ಚಲಾಗದ ಅಥವಾ ಯುಕ್ತವಾಗಿ ಪರೀಕ್ಷೆ ಮಾಡಲಾಗದ, ಮೇಲ್ನೋಟಕ್ಕೆ ವಂಚನೆ ಅಥವಾ ದುರ್ವಿನಿಯೋಗ ಅಥವಾ ಅಪರಾಧಿತ ದುರ್ವಿನಿಯೋಗವೆಂದು ಕಂಡುಬರುವ ಸಂದರ್ಭದಲ್ಲಿ ಅಥವಾ ಲೆಕ್ಕಪತ್ರಗಳೆಂದು ಕಂಡುಬರುವ ಸಂದರ್ಭದಲ್ಲಿ ಅಥವಾ ಲೆಕ್ಕಪತ್ರಗಳ ತಪ್ಪು ವರ್ಗೀಕರಣವಾಗಿದೆ ಎಂಬ ಸಂಧರ್ಭದಲ್ಲಿ ಅಥವಾ ಸಂಘದ ಹಣಕಾಸು ಸ್ಥಿತಿಗತಿಯನ್ನು ವಾಸ್ತವವಾಗಿ ಪ್ರತಿಬಿಂಬಸುವಂಥ ಯಾವುದೇ ಇತರ ಯುಕ್ತ ಕಾರಣಗಳ ಸಂದರ್ಭದಲ್ಲಿ ಮಾತ್ರ ಅಂಥ ಪುನರ ಲೆಕ್ಕಪರಿಶೋಧನೆಗೆ ಆದೇಶಿಸತಕ್ಕದ್ದು.

Xxx xxx

(19) ಸಹಕಾರಿ ಸಂಘಗಳ ಲೆಕ್ಕಪರಿಶೋಧಕರು ಅಥವಾ ಲೆಕ್ಕಪರಿಶೋಧನಾ ಫರ್ಮ್‌ಗಳ ಪರಿಶ್ರಮ ಧನವನ್ನು ಸಂಘಗಳಿಂದ ಭರಿಸತಕ್ಕದ್ದು ಮತ್ತು ಅದು ಸಂಘದ ಮಹಾಸಭೆಯು ನಿಗದಿ ಪಡಿಸಬಹುದಾದಂಥ ದರಗಳಲ್ಲಿರತಕ್ಕದ್ದು.

(20) ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕರು, ಜಿಲ್ಲಾವಾರು ಸಹಕಾರಿ ಸಂಘಗಳ ಪಟ್ಟಿ, ಕಾರ್ಯನಿರ್ವಹಣಾ ಸಂಘಗಳ ಪಟ್ಟಿ ನಿಗದಿ ಪಡಿಸಬಹುದಾದ ಸಮಯದೊಳಗೆ ಮತ್ತು ಅದರ ಕಾರಣಗಳೊಂದಿಗೆ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆ ಮಾಡಿದಂಥ ಸಂಘಗಳ ಪಟ್ಟಿ, ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆ ಮಾಡದಂಥ ಸಂಘಗಳ ಪಟ್ಟಿಯನ್ನು ನಿರ್ವಹಿಸತಕ್ಕದ್ದು. ಈತನು ಸಹಕಾರಿ ಸಂಘಗಳು ಮತ್ತು ಲೆಕ್ಕಪರಿಶೋಧಕರು ಮತ್ತು ಲೆಕ್ಕಪರಿಶೋಧನಾ ಸಂಸ್ಥೆಗಳೊಂದಿಗೆ ಸಹಕರಿಸತಕ್ಕದ್ದು ಮತ್ತು ಪ್ರತೀ ವರ್ಷ ಸಕಾಲದಲ್ಲಿ ಎಲ್ಲ ಸಹಕಾರಿ ಸಂಘಗಳ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ಪೂರ್ಣಗೊಳಿಸುವುದನ್ನು ಖಚಿತಪಡಿಸತಕ್ಕದ್ದು.

**ವಿವರಣೆ:**– ಈ ಪ್ರಕರಣದ ಉದ್ದೇಶಕ್ಕಾಗಿ,–

(i) **'ಲೆಕ್ಕ ಪರಿಶೋಧಕ'** ಎಂದರೆ, ಪದವಿ ಅಥವಾ ಸ್ನಾತಕೋತ್ತರ ಪದವಿಯ ಜೊತೆಗೆ ಸಹಕಾರ ಸಂಘಗಳ ವ್ಯವಸ್ಥಾಪನೆಯಲ್ಲಿ ಉನ್ನತ ಡಿಪ್ಲೊಮೊ/ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯಲ್ಲಿ ಡಿಪ್ಲೋಮೊ/ಸಹಕಾರ ಸಂಘ ವ್ಯವಸ್ಥಾಪನೆಯಲ್ಲಿ, ಸಾಮಾನ್ಯ ಡಿಪ್ಲೊಮೊದಲ್ಲಿ ಉತ್ತೀರ್ಣನಾಗಿರುವ ಮತ್ತು ಪ್ರೊಬೇಷನ್ ಅವಧಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರುವ ಮತ್ತು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜ್ಞಾನವನ್ನು ಹೊಂದಿರುವಂಥ ಒಬ್ಬ ಲೆಕ್ಕ ಪರಿಶೋಧಕ ಅಥವಾ ಸಹಕಾರಿ ಲೆಕ್ಕ ಪರಿಶೋಧನಾ ಇಲಾಖೆಯ ಒಬ್ಬ ಅಧಿಕಾರಿ; ಅಥವಾ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಬಗ್ಗೆ ಯುಕ್ತ ತಿಳುವಳಿಕೆಯನ್ನು ಹೊಂದಿರುವ ಮತ್ತು ಪಟ್ಟಿಯಲ್ಲಿ ಸೇರಿಸುವ ಸಂಭವವಿರುವ ಲೆಕ್ಕಪರಿಶೋಧನಾ ಫರ್ಮಿನ ಲೆಕ್ಕಪರಿಶೋಧನೆಯ ಸಂಬಂಧದಲ್ಲಿ, ಅಂಥ ವಿಧದ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯಲ್ಲಿ ಕೋನೇಪಕ್ಷ ಮೂರು ವರ್ಷಗಳ ಅನುಭವವನ್ನು ಹೊಂದಿರುವ ಚಾರ್ಟರ್ಡ್ ಅಕೌಂಟೆಂಟರ ಅಧಿನಿಯಮ, 1949ರ ಅರ್ಥ ವ್ಯಾಪ್ತಿಯಲ್ಲಿ ಬರುವ ಒಬ್ಬ ಚಾರ್ಟರ್ಡ್ ಅಕೌಂಟೆಂಟ್ ಎಂದು ಸಹ ಅರ್ಥ ಮತ್ತು ಚಾರ್ಟರ್ಡ್ ಅಕೌಂಟೆಂಟರು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜ್ಞಾನವನ್ನು ಹೊಂದಿರತಕ್ಕದ್ದು.

(ii)**'ಲೆಕ್ಕ ಪರಿಶೋಧನಾ ಫರ್ಮ್'** ಎಂದರೆ, ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಬಗ್ಗೆ ಯುಕ್ತ ಜ್ಞಾನವನ್ನು ಹೊಂದಿರುವ ಮತ್ತು ಪಟ್ಟಿಯಲ್ಲಿ ಸೇರಿಸುವ ಸಂಭವವಿರುವ ಲೆಕ್ಕ ಪರಿಶೋಧನಾ ಫರ್ಮಿನ ಲೆಕ್ಕ ಪರಿಶೋಧನೆಯ ಸಂಬಂಧದಲ್ಲಿ ಅಂಥ ವಿಧದ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯಲ್ಲಿ ಕೊನೇ ಪಕ್ಷ ಮೂರು ವರ್ಷಗಳ ಅನುಭವ ಹೊಂದಿರುವ ಚಾರ್ಟರ್ಡ್ ಅಕೌಂಟೆಂಟರ ಅಧಿನಿಯಮ, 1949ರ ಅರ್ಥ ವ್ಯಾಪ್ತಿಯೊಳಗೆ ಬರುವ ಒಂದು ಅಥವಾ ಹೆಚ್ಚು ಚಾರ್ಟರ್ಡ್ ಅಕೌಂಟೆಂಟರು ಮತ್ತು ಚಾರ್ಟರ್ಡ್ ಅಕೌಂಟೆಂಟರು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜ್ಞಾನವನ್ನು ಹೊಂದಿರತಕ್ಕದ್ದು."

Xxx xxx

**66. ಪುಸ್ತಕಗಳನ್ನು ಮತ್ತು ಸ್ವತ್ತನ್ನು ವಶಪಡಿಸಿಕೊಳ್ಳುವ ಅಧಿಕಾರ.**– 63ನೇ ಪ್ರಕರಣದ ಮೇರೆಗೆ ಲೆಕ್ಕಪರಿಶೋಧನೆಯನ್ನು, 64ನೇ ಪ್ರಕರಣದ ಮೇರೆಗೆ ವಿಚಾರಣೆಯನ್ನು ಅಥವಾ 65ನೇ ಪ್ರಕರಣದ ಮೇರೆಗೆ ಪರಿಶೀಲನೆಯನ್ನು ನಡೆಸುವ ಯಾರೇ ಅಧಿಕಾರಿಗೆ ಅಥವಾ ವ್ಯಕ್ತಿಗೆ ಲೆಕ್ಕಪರಿಶೋಧನೆಯ, ವಿಚಾರಣೆಯ ಅಥವಾ ಪರಿಶೀಲನೆಯ ಅವಧಿಯಲ್ಲಿ ತನ್ನ ಗಮನಕ್ಕೆ ಬಂದ ಯಾವುದೇ ನ್ಯೂನತೆ ಅಥವಾ ಅಕ್ರಮಗಳನ್ನು ರುಜುವಾತುಪಡಿಸುವುದಕ್ಕೆ ಸಂಬಂಧಿಸಿದಂತೆ ಅಗತ್ಯವೆಂದು ಅಂಥ ಅಧಿಕಾರಿಯು ಅಥವಾ ವ್ಯಕ್ತಿಯು ಭಾವಿಸಬಹುದಾದಂಥ ಯಾವುದೇ ಸಾಕ್ಷ್ಯವನ್ನು ನಾಶಪಡಿಸುವ ಅಥವಾ ಅಳಿಸುವ ಅಥವಾ ಬದಲಾಯಿಸುವ ಅಥವಾ ಕೈ ಚಳಕ ಮಾಡುವ ದೃಷ್ಟಿಯಿಂದ ಸಂಘದ ಯಾವುವೇ ಪುಸ್ತಕಗಳನ್ನು ಅಥವಾ ಇತರ ಸ್ವತ್ತುಗಳನ್ನು ಕೆಡಿಸಲಾಗಿದೆ ಎಂದು ಅಥವಾ ಅವುಗಳನ್ನು ಸಂಘದಲ್ಲಿ ಉಳಿಯಗೊಟ್ಟರೆ ಹಾಗೆ ಕೆಡಿಸುವ ಸಂಭವವಿದೆಯೆಂದು ನಂಬಲು ಕಾರಣವಿದ್ದರೆ ಅವನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಅವಧಿಯವರೆಗೆ ಅಂಥ ಪುಸ್ತಕಗಳನ್ನು ಅಥವಾ ಸ್ವತ್ತನ್ನು ಜಪ್ತಿ ಮಾಡಲು ಮತ್ತು ಸ್ವಾಧೀನಕ್ಕೆ ತೆಗೆದುಕೊಳ್ಳಲು ಅಧಿಕಾರ ಹೊಂದಿರತಕ್ಕುದು.

Xxx xxx

Provided that the Director of Co-operative audit shall be the authority competent to prepare and maintain a list of auditors and auditing firms who satisfy the prescribed qualification and experience for undertaking the audit of accounts of Co-operative Societies in the state.

Provided further that the Director of Co-operative audit shall communicate a panel of auditors and auditing firms, not exceeding ten, to every cooperative society within thirty days from the close of the Co-operative year.

(2) The general body of every Co-operative Society shall at its general meeting appoint an auditor or an auditing firm to audit the accounts of the society for the Co-operative year in which the general meeting is held.

**XX** **XX** **XX**

(13) If it appears to the State Government on an application by a Co-operative Society or otherwise that it is necessary or expedient to re-audit the accounts of a society, the State Government may, by an order provide for such re-audit and the provisions of the Act, and the rules applicable to the audit shall also apply to such re-audit.

Provided that such re-audit shall be ordered only when there is a prima-facie case of fraud or mis-appropriation or embezzlement of funds not detected or properly examined by the auditor or auditing firms during regular audit or misclassification of accounts or for any other valid reasons with a view to truly reflect the financial position of the society.

**XX** **XX** **XX**

(19) The remuneration of the auditor or auditing firm of a Co-operative Society shall be borne by the society and shall be at such rates as may be fixed by general body of the society.

(20) The Director of Co-operative Audit shall maintain a list of Co-operative Societies districtwise, the list of working societies, the list of societies whose accounts are audited, the list of societies whose accounts are not audited within the prescribed time and the reasons therefor. He shall Co-ordinate with the Co-operative Societies and the auditors or auditing firms and ensure the completion of audit of accounts of all the Co-operative Societies in time every year.

**Explanation:** For the purpose of this section,- (i) 'Auditor' means an auditor or an officer of the Department of Co-operative Audit who has passed, in addition to the graduation or post graduation degree, Higher Diploma in Co-operative Management / Diploma in Co-operative Audit / General Diploma in Co-operative management and who has completed the period of probation successfully and who has a working knowledge of the kannada language; or a Chartered Accountant within the meaning of the Chartered Accountants Act, 1949 who shall have a fair knowledge of the functioning of the Co-operative Societies and shall have an experience of at least three years in auditing of which the auditor would like to be included in the panel and chartered accountants shall have working knowledge of the Kannada language.

(iii) 'Auditing firm' means a firm of more than one Chartered Accountant within the meaning of the Chartered Accountants Act, 1949 who or which shall have a fair knowledge of the functioning of the Co-operative Societies and shall have an experience of at least three years in auditing of which the auditing firm would like to be included in the panel and chartered accountants shall have working knowledge of the Kannada language.

**XX** **XX** **XX**

**66. Power to seize books and property.-** If any officer or person conducting audit under section 63, inquiry under section 64 or inspection under section 65, has reason to believe that any books or other property of the society have been tampered with or are likely to be tampered with, if left with the society with a view to eliminate or efface or change or manipulate any evidence which may be deemed necessary by such officer or person in connection with the proof of any defect or irregularities noticed by him during the course of audit, inquiry or inspection, he shall have power to seize and impound such books or property in such manner and for such period as may be prescribed.

**XX** **XX** **XX**

**70. Disputes which may be referred to Registrar for decision.-** (1) Notwithstanding anything contained in any law for the time being in force, if any dispute touching the constitution, management, or the business of a co-operative society other than a dispute pertaining to the election of the board and election of the office-bearers arises,—

**XX** **XX** **XX**

(4) All disputes related to the election of the members of the board and the election of President, Vice-President, Chairman, Vice-Chairman or any other office-bearer shall be filed in the jurisdictional Civil Court.

(5) All disputes pending with the Registrar as on the date of the constitution of Co-operative election commission shall be disposed of by the Registrar as if this amendment had not been made.

**98B. Overriding effect of Chapter XIA.-** Notwithstanding anything contrary or inconsistent contained in any other chapter of this Act or rules framed there under or bye-laws of any Co-operative Society or orders issued there under, the provisions of this chapter shall have overriding effect except the provisions of sections 12, 16, 17, 19A, 20, 27, 27A,

27B, 28, 28A, 29C, 29E, 29F, 29G, 30, 31, 39A, 39AA, 56, 57A, 63, 64, 65, 70, 72, 108 & 109 in respect of societies in Co-operative credit structure.

XX XX XX

**98E. Freedom in all financial and internal administrative matters.– XX XX XX**

(iii) the personnel policies including issues relating to recruitment, promotion, staffing, training, posting and compensation to staff as per business requirements of the society;

XX XX XX

**98Y. Exemption by the State Government.-**No society in the Co-operative Credit Structure shall be exempted under section 121 of this Act in 1959 any manner from the application of the provisions of this chapter without prior consultation with the Reserve Bank or the National Bank.

XX XX XX

**105A. Appeals relating to admission of members to societies.-**(1) Any person who has made an application for admission as a member under sub-section (3) of section 16 may appeal to the general body against any refusal of the Co-operative Society to admit him as a member or against any failure on its part within the period referred to in sub-section (4) of section 16 to admit him as a member or to send a notice of its refusal to admit.

XX XX XX

(3)The general body of the Co-operative Society shall, after giving a reasonable opportunity to the person concerned to make his representation, if any, in writing and after considering the reasons for refusal of membership by the board, direct either that the person shall be admitted as a member by the Co-operative Society or that he need not be admitted by the cooperative society, and in the former case, the board shall give effect to the decision within ten days of the resolution of the general body.

XX XX XX

**132. Power to remove difficulties.-** (1) If any difficulty arises in giving effect to the provisions of this Act in consequence of the transition to the said provisions from the provisions of the Acts in force immediately before the commencement of this Act, the State Government, may, by notification in the official Gazette, make such provisions as appear to it to be necessary or expedient for removing the difficulty.

(2) If any difficulty arises in giving effect to the provisions of this Act (otherwise than in relation to the transition from the provisions of the Acts in force before the commencement of this Act), the State Government may by notification make such provisions, not inconsistent with the purposes of this Act, as appear to it to be necessary or expedient for removing the difficulty.


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೮, ೨೦೧೪ (ಶ್ರಾವಣ ೬, ಶಕ ವರ್ಷ ೧೯೩೬) | ನಂ. ೫೦೬ |
| **Part – IV-A** | **Bangalore, Monday, July 28, 2014 (Shravana 6, Shaka Varsha 1936)** | **No. 506** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/52/LA Bill/2014, Bangalore, Dated: 28-7-2014**

The following Bill was introduced in Legislative Assembly on 28-7-2014

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ನಾಲ್ಕನೇ ಅಧಿವೇಶನ**

## ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ವಿಧೇಯಕ, 2014

**(2014ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 52)**

ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇದರಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ನ್ನು (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 17) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ,

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ಎಂದರೆ :–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ಅಧಿನಿಯಮ 2014 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ:–** ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997 (2000ರ ಕರ್ನಾಟಕ ಅಧಿನಿಯಮ ಸಂಖ್ಯೆ 17) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) **2ನೇ ಪ್ರಕರಣದ, ಉಪಪ್ರಕರಣ (ಎ2)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–**

**"(ಎ2) ' ಹಿಂದುಳಿದ ವರ್ಗಗಳು' ಎಂದರೆ, ಸಹಕಾರಿಗಳ ಮಂಡಲಿಯಲ್ಲಿ ಮೀಸಲಾತಿ ಉದ್ದೇಶಕ್ಕಾಗಿ ಕಾಲಕಾಲಕ್ಕೆ ಸರ್ಕಾರದಿಂದ "ಎ" ಮತ್ತು "ಬಿ" ಪ್ರವರ್ಗಗಳು ಎಂಬುದಾಗಿ ವರ್ಗೀಕರಿಸಬಹುದಾದ ಮತ್ತು ಅಧಿಸೂಚಿಸಬಹುದಾದ ಅಂಥ ವರ್ಗ ಅಥವಾ ವರ್ಗಗಳ ನಾಗರೀಕರು."**

**3. 4ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ರ (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 17) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 4ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಅಂಥವುಗಳನ್ನು" ಎಂಬ ಪದದ ತರುವಾಯ "ಬೇರೆ ಬೇರೆ ಸಹಕಾರಿಗಳ ನಡುವೆ ಅನಾರೋಗ್ಯಕರ ಸ್ಪರ್ಧೆ ತಪ್ಪಿಸುವ ಸಲುವಾಗಿ ಸಹಕಾರಿಯ ನೋಂದಣಿಗೆ ಸಂಬಂಧಿಸಿದಂತೆ ರಿಜಿಸ್ಟ್ರಾರನು ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನ, ಸುತ್ತೋಲೆಗಳಿಗೊಳಪಟ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

**4. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ "ಅಂಚೆಯ ಮೂಲಕ ಕಳುಹಿಸತಕ್ಕದ್ದು" ಎಂಬ ಪದಗಳ ತರುವಾಯ "ಅಥವಾ ಖುದ್ದಾಗಿ ಸಲ್ಲಿಸತಕ್ಕದ್ದು. ವಿಳಂಬವಾಗಿ ಸಲ್ಲಿಸಿರುವ ಸಂದರ್ಭದಲ್ಲಿ, ವಿಳಂಬಕ್ಕೆ ಸಕಾರಣಗಳಿವೆಯೆಂದು ರಿಜಿಸ್ಟಾರನಿಗೆ ಮನದಟ್ಟಾದರೆ, ಅಂತಹ ವಿಳಂಬವನ್ನು ಮನ್ನಿಸಿ, ಉಪವಿಧಿ ತಿದ್ದುಪಡಿ ಪ್ರಸ್ತಾವನೆಯನ್ನು ಪರಿಗಣಿಸಬಹುದು." ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (3)ನೇ ಉಪಪ್ರಕರಣದ (ಸಿ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು. ಎಂದರೆ:–

"(ಡಿ) ನಿಯಮಿಸಲಾದಂತೆ ನಿಗದಿಪಡಿಸುವ ಶುಲ್ಕವನ್ನು ರಿಜಿಸ್ಟ್ರಾರನ ಹೆಸರಿನಲ್ಲಿ ಖಜಾನೆ ಚಲನ್ ಅಥವಾ ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸಿರುವ ದಾಖಲೆ."

**5. 17ನೇ ಪ್ರಕರಣದ ತಿದ್ದುಪಡಿ–** ಮೂಲ ಅಧಿನಿಯಮದ 17ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**17. ನಿಧಿಗಳ ಸಂಗ್ರಹಣೆ.–** ಸಹಕಾರಿಯು ತನ್ನ ಸದಸ್ಯರಿಂದ ತನ್ನ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದ ಅಂಥ ವ್ಯಾಪ್ತಿ ಮತ್ತು ಅಂಥ ಷರತ್ತಿಗಳಿಗೊಳಪಟ್ಟು, ಷೇರು ಬಂಡವಾಳ, ಠೇವಣಿಗಳು, ಡಿಬೆಂಚರುಗಳು, ಸಾಲಗಳು ಮತ್ತು ಇತರ ವಂತಿಗೆಗಳು ಮತ್ತು ನಿಧಿಗಳನ್ನು ಸಂಗ್ರಹಿಸಬಹುದು:

ಪರಂತು, ಒಂದು ಸಹಕಾರಿಯು, ಸರ್ಕಾರದಿಂದ ಅಥವಾ ಸರ್ಕಾರದ ಖಾತರಿಯಿಂದ ಯಾವುದೇ ಸಾಲ, ಸಹಾಯಧನ, ಅನುದಾನ ಅಥವಾ ಯಾವುದೇ ರೂಪದಲ್ಲಿ ಆರ್ಥಿಕ ನೆರವನ್ನು ಪಡೆಯಲು ಅರ್ಹವಾಗಿರತಕ್ಕದಲ್ಲ:

ಮತ್ತು ಪರಂತು, ಮೊದಲನೇ ಪರಂತುಕದಲ್ಲಿ ಇರುವುದಾವುದೂ, ಒಂದು ಸಹಕಾರಿ ಬ್ಯಾಂಕಿಗೆ ಅನ್ವಯವಾಗತಕ್ಕದ್ದಲ್ಲ."

**6. 20ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 20ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ 'ಸ್ಪರ್ಧಾತ್ಮಕವಾಗಿರುವಲ್ಲಿ' ಎಂಬ ಪದಕ್ಕೆ "ಅಥವಾ ಸಮಾನ ಉದ್ದೇಶದ ಇನ್ನೊಂದು ಸಹಕಾರಿಯ ಸದಸ್ಯನಾಗಿರುವಲ್ಲಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

**7. 20ಎ ಮತ್ತು 20ಬಿ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 20ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

**"20ಎ.– ಸದಸ್ಯತ್ವವನ್ನು ಒಪ್ಪುವುದು ಅಥವಾ ನಿರಾಕರಿಸುವುದು:–** ಯಾವೊಬ್ಬ ವ್ಯಕ್ತಿಯು ಸದಸ್ಯತ್ವವನ್ನು ಬಯಸಿ ಯಾವುದೇ ಸಹಕಾರಿಗೆ ಉಪವಿಧಿಗಳಲ್ಲಿ ನಿಗದಿಪಡಿಸಿರುವ ಷೇರು ಹಣ ಮತ್ತು ಶುಲ್ಕ ಪಾವತಿಸಲು ಅರ್ಜಿ ಸಲ್ಲಿಸಿದಾಗ ಅಂತಹ ಅರ್ಜಿಯನ್ನು ಸಂಬಂಧಿಸಿದ ಮಂಡಲಿಯು ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಅರವತ್ತು ದಿನಗಳೊಳಗೆ ಸದಸ್ಯತ್ವವನ್ನು ನೀಡತಕ್ಕದ್ದು ಅಥವಾ ಕಾರಣಗಳೊಂದಿಗೆ ನಿರಾಕರಿಸತಕ್ಕದ್ದು. ಈ ಅವಧಿಯೊಳಗೆ ಅರ್ಜಿದಾರನಿಗೆ ತನ್ನ ಸದಸ್ಯತ್ವ ಕೋರಿಕೆ ಅರ್ಜಿಯ ಬಗ್ಗೆ ಸಂಬಂಧಪಟ್ಟ ಸಹಕಾರಿಯಿಂದ ಯಾವುದೇ ರೀತಿಯ ಆದೇಶ ಬಾರದೇ ಇದ್ದಲ್ಲಿ, ಅಂತಹ ಅರ್ಜಿದಾರನ ಸದಸ್ಯತ್ವದ ಅರ್ಜಿಯನ್ನು ಅಂಥ ಸಹಕಾರಿಯು ಅಂತಹ ಅವಧಿಯ ಕೊನೆಯ ದಿನದಂದು ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದು. ಒಂದು ವೇಳೆ ನಿರಾಕರಿಸಿದಲ್ಲಿ ಈ ನಿರಾಕರಣೆಯನ್ನು ಪ್ರಶ್ನಿಸಿ ನಿರಾಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ರಿಜಿಸ್ಟ್ರಾರ್‌ನ ಮುಂದೆ ಸಂಬಂಧಿತ ವ್ಯಕ್ತಿಯು ಮೇಲ್ಮನವಿ ಸಲ್ಲಿಸಬಹುದು. ರಿಜಿಸ್ಟ್ರಾರನು ಈ ಮೇಲ್ಮನವಿಯನ್ನು ಇತ್ಯರ್ಥಪಡಿಸಿ ಆದೇಶ ಹೊರಡಿಸತಕ್ಕದ್ದು. ಅಂತಹ ಆದೇಶವನ್ನು ಆ ಆದೇಶ ಹೊರಡಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗೆ ಸಹಕಾರಿಯು ಅನುಷ್ಠಾನಗೊಳಿಸತಕ್ಕದ್ದು.

**20ಬಿ.– ಸದಸ್ಯನ ಮತದಾನದ ಹಕ್ಕು:–** ಯಾವುದೇ ಸಹಕಾರಿಯ ಮಹಾ ಸಭೆಯ ದಿನಾಂಕದಿಂದ ಅಥವಾ ಸಂದರ್ಭಾನುಸಾರ ಚುನಾವಣಾ ದಿನಾಂಕದಿಂದ ಒಂದು ವರ್ಷ ಪೂರ್ವದಲ್ಲಿ ಸದಸ್ಯರಾದವರಿಗೆ ಮಾತ್ರ ಅಂಥ ಸಹಕಾರಿಯ ಮಹಾ ಸಭೆಯಲ್ಲಿ ಭಾಗವಹಿಸಲು ಮತ್ತು ಮಂಡಲಿ ಚುನಾವಣೆಯಲ್ಲಿ ಮತದಾನ ಮಾಡಲು ಅವಕಾಶ ಇರತಕ್ಕದ್ದು:

ಪರಂತು, ಸಹಕಾರಿಯು ಹೊಸದಾಗಿ ನೋಂದಣಿಗೊಂಡ ತರುವಾಯ ಕೂಡಲೇ ನಡೆಯುವ ಸಹಕಾರಿಯ ಆಡಳಿತ ಮಂಡಲಿಯ ಮೊದಲ ಚುನಾವಣೆಯಲ್ಲಿ ಭಾಗವಹಿಸುವ ಸದಸ್ಯನಿಗೆ ಮತ್ತು ಪ್ರಥಮ ಮಹಾ ಸಭೆಯಲ್ಲಿ ಭಾಗವಹಿಸುವ ಸದಸ್ಯನಿಗೆ ಈ ನಿರ್ಬಂಧವು ಅನ್ವಯಿಸತಕ್ಕದ್ದಲ್ಲ."

**8. 21ಎ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 21ಎ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿರುವ ಎರಡನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

**9. 21ಬಿ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 21ಎ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"21ಬಿ.– ಸಹ ಸದಸ್ಯತ್ವ:–** (1) ಒಂದು ಸಹಕಾರಿಯು,–

(ಎ) ಯಾವೊಬ್ಬ ವ್ಯಕ್ತಿಯನ್ನು, ಅಥವಾ

(ಬಿ) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ರಚಿತವಾದ ಯಾವುದೇ ಫರ್ಮು, ಕಂಪನಿ, ಸಹಕಾರ ಸಂಘ, ಸಹಕಾರಿ ಅಥವಾ ಯಾವುದೇ ನಿಕಾಯ ಅಥವಾ ನಿಗಮವನ್ನು,

–ಅಂಥ ಸಹಕಾರಿಯ ಉಪವಿಧಿಯಲ್ಲಿ ನಮೂದಿಸಬಹುದಾದ ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ ಸಹ ಸದಸ್ಯ ಎಂದು ಸೇರಿಸಿಕೊಳ್ಳಬಹುದು:

ಪರಂತು, ಯಾವುದೇ ಸಹಕಾರಿಯ ಸಹ ಸದಸ್ಯರ ಸಂಖ್ಯೆಯು ಅಂಥ ಸಹಕಾರಿಯ ಒಟ್ಟು ಸದಸ್ಯರ ಸಂಖ್ಯೆಯ ಗರಿಷ್ಠ ಶೇಕಡ ಹತ್ತನ್ನು ಮೀರತಕ್ಕದ್ದಲ್ಲ. ಒಂದು ವೇಳೆ ಈಗಾಗಲೇ ಸಹಕಾರಿಯು ತನ್ನ ಒಟ್ಟು ಸದಸ್ಯರ ಸಂಖ್ಯೆಯ ಶೇಕಡ ಹತ್ತಕ್ಕಿಂತ ಹೆಚ್ಚಾಗಿ ಸಹ ಸದಸ್ಯರನ್ನು ಹೊಂದಿದ್ದಲ್ಲಿ, ಅಧಿಕವಾಗಿರುವ ಸಹ ಸದಸ್ಯರನ್ನು ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ಅಧಿನಿಯಮ, 2014 ಜಾರಿ ಬಂದ ದಿನಾಂಕದಿಂದ ಆರು ತಿಂಗಳೊಳಗೆ ಸಾಮಾನ್ಯ ಸದಸ್ಯರನ್ನಾಗಿ ಮಾಡಿಕೊಳ್ಳತಕ್ಕದ್ದು ಅಥವಾ ಸಹ ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು.

(2) ಸಹ ಸದಸ್ಯನು ಸಹಕಾರಿಯ ಷೇರುಗಳನ್ನು ಹೊಂದಿರಬಹುದು ಆದರೆ, ಸಹಕಾರಿಯ ಒಬ್ಬ ಪದಾಧಿಕಾರಿಯಾಗಲು ಅರ್ಹತೆ ಹೊಂದಿರತಕ್ಕದ್ದಲ್ಲ. ಸಹ ಸದಸ್ಯನು ಸಹಕಾರಿಯ ವ್ಯವಸ್ಥಾಪನೆಯಲ್ಲಿ ಭಾಗವಹಿಸಲು ಮತ್ತು ಸಹಕಾರಿಯ ಯಾವುದೇ ಸಭೆಯಲ್ಲಿ ಮತ್ತು ಚುನಾವಣೆಯಲ್ಲಿ ಭಾಗವಹಿಸಲು ಮತ್ತು ಮತ ಚಲಾಯಿಸಲು ಅವಕಾಶವಿರತಕ್ಕದ್ದಲ್ಲ.

(3) ಈ ಪ್ರಕರಣದಲ್ಲಿ ಉಪಬಂಧಿಸಿರುವುದನ್ನುಳಿದು, ಒಬ್ಬ ಸಹ ಸದಸ್ಯನು, ಸಹಕಾರಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಒಬ್ಬ ಸದಸ್ಯನು ಹೊಂದಿರುವ ಎಲ್ಲಾ ಹಕ್ಕುಗಳಿಗೆ ಮತ್ತು ಸದಸ್ಯನ ಹೊಣೆಗಾರಿಕೆಗಳನ್ನು ಹೊಂದಿರತಕ್ಕದ್ದು."

**10. 22ನೇ ಪ್ರಕರಣದ ತಿದ್ದುಪಡಿ–** ಮೂಲ ಅಧಿನಿಯಮದ 22ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ–

"**22. ಸದಸ್ಯೇತರರಿಂದ ಠೇವಣಿ ಸಂಗ್ರಹಣೆಗೆ ನಿರ್ಬಂಧ.–** ಭಾರತೀಯ ರಿಸರ್ವ್ ಬ್ಯಾಂಕಿನಿಂದ, ಬ್ಯಾಂಕಿಂಗ್ ವ್ಯವಹಾರ ನಡೆಸಲು ಪರವಾನಗಿ ಪಡೆದಿರುವ ಸೌಹಾರ್ದ ಸಹಕಾರಿ ಬ್ಯಾಂಕ್‌ಗಳನ್ನು ಹೊರತುಪಡಿಸಿ ಇತರೆ ಯಾವುದೇ ಸಹಕಾರಿಗಳು ನಾಮಮಾತ್ರ ಸದಸ್ಯರು ಸೇರಿದಂತೆ ಇತರೆ ಯಾವುದೇ ಸದಸ್ಯರೇತರರಿಂದ ಠೇವಣಿಯನ್ನು ಸಂಗ್ರಹಿಸತಕ್ಕದ್ದಲ್ಲ".

**11. 23ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 23ನೇ ಪ್ರಕರಣದ (3)ನೇ ಉಪಪ್ರಕರಣದ (ಕೆ–4) ಖಂಡನ್ನು ಬಿಟ್ಟುಬಿಡತಕ್ಕದ್ದು.

**12. 23ಎ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 23ಎ ಪ್ರಕರಣದ ತರುವಾಯ ಈ ಕೆಳಗಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಪಟ್ಟಣ ಸಹಕಾರ ಬ್ಯಾಂಕುಗಳು ಶಾಖೆಗಳನ್ನು ತೆರೆಯಲು ಭಾರತೀಯ ರಿಸರ್ವ್ ಬ್ಯಾಂಕಿನಿಂದ ಅನುಮತಿ ಪಡೆದ ಸಂದರ್ಭದಲ್ಲಿ ಸಂಯುಕ್ತ ಸಹಕಾರಿಯ ಅನುಮತಿ ಅಗತ್ಯವಿಲ್ಲ."

**13. 23ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 23ಬಿ ಪ್ರಕರಣದ ಕೊನೆಯಲ್ಲಿ ಈ ಮುಂದಿನದನ್ನು ಸೇರಿಸತಕ್ಕದ್ದು, ಅಂದರೆ,–

"ಹೊಸದಾಗಿ ನೋಂದಣಿಯಾಗುವ ಸಹಕಾರಿಗಳ ಉಪವಿಧಿಗಳಲ್ಲಿ ಪ್ರಾತಿನಿಧಿಕ ಸಾಮಾನ್ಯ ನಿಕಾಯವನ್ನು ರಚಿಸಲು ಅವಕಾಶ ಮಾಡಬಹುದು."

**14. 24ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 24ನೇ ಪ್ರಕರಣದಲ್ಲಿ–

(i) "ಹೆಚ್ಚಿಲ್ಲದ" ಎಂಬ ಪದದ ತರುವಾಯ "ಚುನಾಯಿತ" ಎಂಬ ಪದವನ್ನು ಸೇರಿಸತಕ್ಕದ್ದು.

(ii) (1)ನೇ ಉಪಪ್ರಕರಣದ ನಾಲ್ಕನೇ ಪರಂತುಕದಲ್ಲಿ "ಆಡಳಿತ ಮಂಡಲಿಯ" ಎಂಬ ಪದಗಳಿಗೆ ಮೊದಲು ",ಅವಶ್ಯವಿದ್ದಲ್ಲಿ," ಎಂಬ ಪದವನ್ನು ಮತ್ತು ಅಲ್ಪ ವಿರಾಮ ಚಿಹ್ನೆಗಳನ್ನು ಸೇರಿಸತಕ್ಕದ್ದು.

(iii) (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಈ ಅಧಿನಿಯಮದಲ್ಲಿ ಅನ್ಯಥಾ ಅಗತ್ಯಪಡಿಸದ ಹೊರತು ಚುನಾಯಿತ ನಿರ್ದೇಶಕರುಗಳ ಪದಾವಧಿಯು ಚುನಾವಣೆ ನಡೆದ ದಿನಾಂಕದಿಂದ ಐದು ವರ್ಷಗಳಾಗಿರತಕ್ಕದ್ದು:

ಪರಂತು, ಸಂಯುಕ್ತ ಸೌಹಾರ್ದ ಸಹಕಾರಿಯ ನಿರ್ದೇಶಕತ್ವದ ಅಧಿಕಾರಾವಧಿಯು ಪ್ರತಿನಿಧಿಸಲ್ಪಡುವ ಸಹಕಾರಿಯ ಆಡಳಿತ ಮಂಡಲಿಯ ಅಧಿಕಾರಾವಧಿಯೊಂದಿಗೆ ಅಂತ್ಯವಾಗತಕ್ಕದ್ದು."

**15. 25ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 25ನೇ ಪ್ರಕರಣದಲ್ಲಿ–

(1) (1)ನೇ ಉಪಪ್ರಕರಣದಲ್ಲಿ ಖಂಡ (ಎಫ್) ದಲ್ಲಿ "ಅನರ್ಹತೆಗೆ ಗುರಿಯಾದ ದಿನಾಂಕದಿಂದ" ಎಂಬ ಪದಗಳ ನಂತರ "ಗರಿಷ್ಠ" ಎಂಬ ಪದವನ್ನು ಸೇರಿಸತಕ್ಕದ್ದು.

(2) (2)ನೇ ಉಪಪ್ರಕರಣದಲ್ಲಿ,– (i) (ಎ) ಖಂಡದಲ್ಲಿ "ಅಥವಾ ತತ್ಪರಿಣಾಮವಾಗಿ ಅಥವಾ ಅನ್ಯಥಾ ಯಾವುದೇ ಕಾರಣದಿಂದ ಸಹಕಾರ ಚುನಾವಣಾ ಆಯೋಗವು ನಿಗದಿತ ಅವಧಿಯೊಳಗೆ ಚುನಾವಣೆಗಳನ್ನು ನಡೆಸದಿದ್ದರೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ii) "ಅನರ್ಹತೆಗೆ ಗುರಿಯಾದ ದಿನಾಂಕದಿಂದ" ಎಂಬ ಪದಗಳ ನಂತರ "ಗರಿಷ್ಠ"ಎಂಬ ಪದವನ್ನು ಸೇರಿಸತಕ್ಕದ್ದು.

**16. 26ನೇ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 26ನೇ ಪ್ರಕರಣದ (4)ನೇ ಉಪಪ್ರಕರಣವನ್ನು ಪರಂತುಕದ ಸಹಿತ ಬಿಟ್ಟುಬಿಡತಕ್ಕದ್ದು.

**17. 28ನೇ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 28ನೇ ಪ್ರಕರಣದ (3)ನೇ ಉಪಪ್ರಕರಣದ ತರುವಾಯ ಈ ಕೆಳಗಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಸಂಯುಕ್ತ ಸೌಹಾರ್ದ ಸಹಕಾರಿಯ ಪದಾಧಿಕಾರಿಯ ಅಧಿಕಾರಾವಧಿಯು ಪ್ರತಿನಿಧಿಸಲ್ಪಡುವ ಸಹಕಾರಿಯ ಆಡಳಿತ ಮಂಡಲಿಯ ಅಧಿಕಾರಾವಧಿಯೊಂದಿಗೆ ಅಂತ್ಯವಾಗತಕ್ಕದ್ದು."

**18. 28ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 28ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು. ಎಂದರೆ:–

**"28ಎ.– ಸಹಕಾರಿಯ ಮಂಡಲಿಯ ಸದಸ್ಯ ಅಥವಾ ಪದಾಧಿಕಾರಿಯ ರಾಜೀನಾಮೆ–** ಸಹಕಾರಿಯ ಮಂಡಲಿ ಸದಸ್ಯನು ಅಥವಾ ಪದಾಧಿಕಾರಿಯು ಮಂಡಲಿಯ ತನ್ನ ಸದಸ್ಯತ್ವಕ್ಕೆ ಅಥವಾ ಸಂದರ್ಭಾನುಸಾರವಾಗಿ ಪದಾಧಿಕಾರಿ ಹುದ್ದೆಗೆ ತನ್ನ ಸ್ವಹಸ್ತ ಬರಹದ ಮೂಲಕ ರಾಜೀನಾಮೆಯನ್ನು ಮುಖ್ಯ ಕಾರ್ಯನಿರ್ವಾಹಕನಿಗೆ ನೀಡಬಹುದು. ಮತ್ತು ರಾಜೀನಾಮೆ ನೀಡಿದ ದಿನಾಂಕದಿಂದ ಹದಿನೈದು ದಿನಗಳೊಳಗೆ ತನ್ನ ಸ್ವಹಸ್ತಬರಹದ ಮೂಲಕ ಅಂತಹ ರಾಜೀನಾಮೆಯನ್ನು ಮುಖ್ಯ ಕಾರ್ಯನಿರ್ವಾಹಕನಿಗೆ ಹಿಂಪಡೆಯಲು ಪತ್ರವನ್ನು ನೀಡದ ಹೊರತು, ರಾಜೀನಾಮೆ ನೀಡಿದ ದಿನಾಂಕದಿಂದ ಹದಿನೈದು ದಿನಗಳು ಮುಗಿದ ನಂತರ ಆತನ ಸ್ಥಾನವು ಅಥವಾ ಸಂದರ್ಭಾನುಸಾರವಾಗಿ ಹುದ್ದೆಯು ತೆರವಾಗತಕ್ಕದ್ದು. ಮುಖ್ಯ ಕಾರ್ಯನಿರ್ವಾಹಕನು ರಾಜೀನಾಮೆ ಪತ್ರ ನೀಡಿದ ನಂತರ ಸಮಾವೇಶಗೊಳ್ಳುವ ಮಂಡಲಿಯ ಸಭೆಯ ಮುಂದಿಡತಕ್ಕದ್ದು".

**19. 30ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 30ನೇ ಪ್ರಕರಣದ (4)ನೇ ಉಪಪ್ರಕರಣದಲ್ಲಿ "ಶೇಕಡ ಇಪ್ಪತ್ತಕ್ಕಿಂತ ಕಡಿಮೆ ಇರತಕ್ಕದ್ದಲ್ಲ" ಎಂಬ ಪದಗಳಿಗೆ **"ಶೇಕಡ ಹತ್ತು ಅಥವಾ ಒಂದು ಸಾವಿರ, ಇವೆರಡರಲ್ಲಿ ಯಾವುದು ಕಡಿಮೆಯೋ ಆ ಸಂಖ್ಯೆಯು ಕೋರಂ ಆಗಿರತಕ್ಕದ್ದು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**20. 33ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 33ನೇ ಪ್ರಕರಣದಲ್ಲಿ–

(1) ಶಿರೋನಾಮೆಯಲ್ಲಿ **"ಲೆಕ್ಕಪರಿಶೋಧನೆ"** ಎಂಬ ಪದಕ್ಕೆ **"ಸಹಕಾರಿಯ ಲೆಕ್ಕಪರಿಶೋಧನೆ"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಎರಡನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

(3) (2)ನೇ ಉಪಪ್ರಕರಣದ ತರುವಾಯ ಈ ಮುಂದಿನ ಪರಂತುಕಗಳನ್ನು ಸೇರಿಸತಕ್ಕದ್ದು. ಎಂದರೆ–

"ಪರಂತು, ಯಾವ ಸಹಕಾರಿಯು ಸಹಕಾರಿ ವರ್ಷದ ಲೆಕ್ಕಪರಿಶೋಧನೆಯನ್ನು ಮಾಡಿಸಲು ಮಹಾ ಸಭೆಯಲ್ಲಿ ಲೆಕ್ಕಪರಿಶೋಧಕನನ್ನು ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯನ್ನು ನೇಮಿಸಲು ಮತ್ತು ನಿಯಮಾನುಸಾರ ತಿಳಿಸಲು ವಿಫಲವಾಗಿದೆಯೆಂದು ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನಿಗೆ ಮನದಟ್ಟಾದಲ್ಲಿ, ಸಂಬಂಧಿತ ಸಹಕಾರಿಗೆ ಲಿಖಿತ ಹೇಳಿಕೆ ನೀಡಲು ಅವಕಾಶ ನೀಡಿದ ತರುವಾಯ ಹಾಗೂ ನೇಮಕ ಮಾಡಿಲ್ಲದಿರುವುದನ್ನು ಖಚಿತಪಡಿಸಿಕೊಂಡ ನಂತರ ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನು ಲೆಕ್ಕಪರಿಶೋಧಕರ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಗಳ ಅನುಮೋದಿತ ಪಟ್ಟಿಯೊಳಗಿನಿಂದ ಲೆಕ್ಕಪರಿಶೋಧನೆ ಮಾಡಲು ವಿಫಲವಾದ ಅಂಥ ಸಹಕಾರಿಯ ಸಂಬಂಧಿತ ವರ್ಷದ ಲೆಕ್ಕಪರಿಶೋಧನೆಗೆ ಲೆಕ್ಕಪರಿಶೋಧಕ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯನ್ನು ನೇಮಿಸಬಹುದು ಹಾಗೂ ಸದರಿ ಲೆಕ್ಕಪರಿಶೋಧಕ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯು ಆ ನಿರ್ದಿಷ್ಟ ವರ್ಷಕ್ಕೆ ಆ ಸಹಕಾರಿಯ ಲೆಕ್ಕಪರಿಶೋಧಕರೆಂದು ಪರಿಗಣಿಸತಕ್ಕದ್ದು:

ಮತ್ತು ಪರಂತು, ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನು ನಿರ್ವಹಿಸುವ ಲೆಕ್ಕಪರಿಶೋಧಕರ ಪಟ್ಟಿಯಲ್ಲಿ ನಮೂದಿಸಿರುವ ಸರ್ಕಾರಿ ಲೆಕ್ಕಪರಿಶೋಧಕರ ಸಂದರ್ಭದಲ್ಲಿ ಅವರನ್ನು ಪದನಾಮ ಮಾತ್ರದಿಂದಲೇ ನಮೂದಿಸತಕ್ಕದ್ದು. ಮತ್ತು ಸಹಕಾರಿಯು ಇಂತಹ ಲೆಕ್ಕಪರಿಶೋಧಕರ ಪಟ್ಟಿಯಿಂದ ಸರ್ಕಾರಿ ಲೆಕ್ಕಪರಿಶೋಧಕರನ್ನು ಆಯ್ಕೆ ಮಾಡಿಕೊಂಡಲ್ಲಿ ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನಿಗೆ ತಿಳಿಸತಕ್ಕದ್ದು".

(4) (19)ನೇ ಉಪಪ್ರಕರಣ ಮತ್ತು ನಂತರ ಇರುವ ವಿವರಣೆಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು. ಎಂದರೆ:–

"(19) ಯಾವುದೇ ಸಹಕಾರಿಯ ಲೆಕ್ಕಪರಿಶೋಧಕನ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯ ಸಂಭಾವನೆಯನ್ನು, ಸಹಕಾರಿಯ ದುಡಿಯುವ ಬಂಡವಾಳ ಮತ್ತು ವಹಿವಾಟಿನ ಆಧಾರದ ಮೇಲೆ, ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನು ಕಾಲಕಾಲಕ್ಕೆ ನೀಡುವ ಮಾರ್ಗಸೂಚಿಗಳ ರೀತ್ಯಾ ಅದರ ಸಾಮಾನ್ಯ ನಿಕಾಯವು ನಿಗದಿಪಡಿಸುವ ದರದಲ್ಲಿ ಸಹಕಾರಿಯು ಭರಿಸತಕ್ಕದ್ದು.

(20) ಮೇಲಿನ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರದ ಅನುಮೋದನೆಗೆ ಒಳಪಟ್ಟು ಸಹಕಾರಿಯ ಹಿಂದಿನ ಮೂರು ವರ್ಷಗಳ ಲೆಕ್ಕಪರಿಶೋಧನಾ ಲೆಕ್ಕಪತ್ರಗಳಿಗೆ ಸಂಬಂಧಪಟ್ಟಂತೆ ನಿರ್ದಿಷ್ಟ ಲೆಕ್ಕಪರಿಶೋಧಿತ ಖಾತೆ ಅಥವಾ ಲೆಕ್ಕಪರಿಶೋಧಿತ ಲೆಕ್ಕಗಳನ್ನು ಮರುಪರಿಶೀಲನೆ ಅಥವಾ ಮರುಸತ್ಯಾಪನೆ ಮಾಡುವ ಅಧಿಕಾರವು ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕನಿಗೆ ಇರತಕ್ಕದ್ದು ಹಾಗೂ ಸಂಬಂಧಿತ ಲೆಕ್ಕಪರಿಶೋಧಕರಿಗೆ ಮರುಪರಿಶೀಲನೆ ಅಥವಾ ಮರುಸತ್ಯಾಪನೆ ಸಂದರ್ಭದಲ್ಲಿ ಕಂಡುಬಂದ ಲೋಪದೋಷಗಳನ್ನು ಮುಂದಿನ ವರ್ಷದ ಲೆಕ್ಕಪರಿಶೋಧನಾ ವರದಿಯಲ್ಲಿ ಸೇರ್ಪಡೆಗೊಳಿಸಲು ಸೂಚಿಸಬಹುದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ,–

(i) **'ಲೆಕ್ಕಪರಿಶೋಧಕ'** ಎಂದರೆ, ತನ್ನ ಪದವಿ ಅಥವಾ ಸ್ನಾತಕೋತ್ತರ ಪದವಿಯ ಜೊತೆಗೆ ಸಹಕಾರಿ ವ್ಯವಸ್ಥಾಪನೆಯಲ್ಲಿ ಉನ್ನತ ಡಿಪ್ಲೋಮಾ ಅಥವಾ ಸಹಕಾರಿ ಲೆಕ್ಕಪರಿಶೋಧನೆಯಲ್ಲಿ ಡಿಪ್ಲೋಮಾ ಅಥವಾ ಸಹಕಾರಿ ವ್ಯವಸ್ಥಾಪನೆಯಲ್ಲಿ ಸಾಮಾನ್ಯ ಡಿಪ್ಲೋಮಾದಲ್ಲಿ ತೇರ್ಗಡೆಯಾಗಿರುವ ಮತ್ತು ಪ್ರೊಬೇಷನರಿ ಅವಧಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರುವ ಕನ್ನಡ ಭಾಷೆಯ ವ್ಯವಹಾರ ಜ್ಞಾನವುಳ್ಳ ಸಹಕಾರ ಲೆಕ್ಕಪರಿಶೋಧನಾ ಇಲಾಖೆಯ ಒಬ್ಬ ಲೆಕ್ಕಪರಿಶೋಧಕ ಅಥವಾ ಒಬ್ಬ ಅಧಿಕಾರಿ;

ಅಥವಾ ಕೊನೇ ಪಕ್ಷ ಮೂರು ವರ್ಷಗಳ ಲೆಕ್ಕಪರಿಶೋಧನೆ ಮಾಡಿರುವ ಅನುಭವವುಳ್ಳ ಮತ್ತು ಸಹಕಾರಿ ಸಂಸ್ಥೆಗಳ ಕಾರ್ಯನಿರ್ವಹಣೆ ಬಗ್ಗೆ ಸಾಮಾನ್ಯ ತಿಳುವಳಿಕೆಯುಳ್ಳ ಹಾಗೂ ಪಟ್ಟಿಯಲ್ಲಿ ಸೇರ್ಪಡೆಯಾಗುವ ಇಚ್ಛೆವುಳ್ಳ ಚಾರ್ಟರ್ಡ್ ಲೆಕ್ಕಿಗರ ಅಧಿನಿಯಮ, 1949ರ ಅರ್ಥ ವಿವರಣೆಯಲ್ಲಿ ಬರುವ ಒಬ್ಬ ಸನ್ನದು ಲೆಕ್ಕಿಗ ಅಥವಾ ಕಾಸ್ಟ್ ಮತ್ತು ವರ್ಕ್ಸ್ ಅಕೌಂಟೆಂಟ್ ಅಧಿನಿಯಮ 1959 ರಲ್ಲಿ ಅರ್ಥೈಸಿರುವಂತೆ, ಸಹಕಾರಿ ಸಂಸ್ಥೆಗಳ ಕಾರ್ಯನಿರ್ವಹಣೆ ಬಗ್ಗೆ ವಿಸ್ತೃತ ಜ್ಞಾನವುಳ್ಳ ಸಹಕಾರಿಯ ಲೆಕ್ಕಪರಿಶೋಧನೆಯಲ್ಲಿ ಪರಿಣಿತನಾಗಿರುವ, ಕನಿಷ್ಠ ಮೂರು ವರ್ಷಗಳ ಲೆಕ್ಕಪರಿಶೋಧನೆ ಅನುಭವವುಳ್ಳ ಮತ್ತು ಕನ್ನಡ ಭಾಷಾಜ್ಞಾನವುಳ್ಳ ವೆಚ್ಚಲೆಕ್ಕಿಗ (Cost Accountant) ಹಾಗೂ ಅಂತಹ ಸನ್ನದು ಲೆಕ್ಕಿಗನು ಅಥವಾ ವೆಚ್ಚ ಲೆಕ್ಕಿಗನು ಕಾರ್ಯನಿರ್ವಹಣೆಗೆ ಸಾಕಾಗುವಷ್ಟು ಕನ್ನಡ ಭಾಷೆಯ ಜ್ಞಾನ ಹಾಗೂ ತಿಳುವಳಿಕೆಯನ್ನು ಹೊಂದಿರತಕ್ಕದ್ದು.

(ii) **"ಲೆಕ್ಕಪರಿಶೋಧಿಸುವ ಸಂಸ್ಥೆ"** ಎಂದರೆ, ಕೊನೇ ಪಕ್ಷ ಮೂರು ವರ್ಷಗಳ ಲೆಕ್ಕಪರಿಶೋಧನೆ ಮಾಡಿರುವ ಅನುಭವವುಳ್ಳ ಮತ್ತು ಸಹಕಾರಿ ಸಂಸ್ಥೆಗಳ ಕಾರ್ಯನಿರ್ವಹಣೆ ಬಗ್ಗೆ ಸಾಮಾನ್ಯ ತಿಳುವಳಿಕೆಯುಳ್ಳ ಹಾಗೂ ಪಟ್ಟಿಯಲ್ಲಿ ಸೇರ್ಪಡೆಯಾಗುವ ಇಚ್ಛೆವುಳ್ಳ ಚಾರ್ಟರ್ಡ್ ಲೆಕ್ಕಿಗರ ಅಧಿನಿಯಮ 1949 ರ ಅರ್ಥ ವಿವರಣೆಯಲ್ಲಿ ಬರುವ ಒಬ್ಬರಿಗಿಂತ ಹೆಚ್ಚಿನ ಚಾರ್ಟರ್ಡ್ ಲೆಕ್ಕಿಗರ ಒಂದು ಸಂಸ್ಥೆ ಅಥವಾ ಕಾಸ್ಟ್ ಮತ್ತು ವರ್ಕ್ಸ್ ಅಕೌಂಟೆಂಟ್ ಅಧಿನಿಯಮ 1959 ರಲ್ಲಿ ಅರ್ಥೈಸಿರುವಂತೆ, ಒಂದಕ್ಕಿಂತ ಹೆಚ್ಚಿನ ವೆಚ್ಚ ಲೆಕ್ಕಿಗರನ್ನೊಳಗೊಂಡ ಸಂಸ್ಥೆ ಹಾಗೂ ಅಂತಹ ಚಾರ್ಟರ್ಡ್ ಲೆಕ್ಕಿಗರು ಅಥವಾ ವೆಚ್ಚಲೆಕ್ಕಿಗರು ಕಾರ್ಯನಿರ್ವಹಣೆಗೆ ಸಾಕಾಗುವಷ್ಟು ಕನ್ನಡ ಭಾಷೆಯ ಜ್ಞಾನ ಹಾಗೂ ತಿಳುವಳಿಕೆಯನ್ನು ಹೊಂದಿರತಕ್ಕದ್ದು."

**21. 35ನೇ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 35ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ (1)ನೇ ಖಂಡದಲ್ಲಿ "ಉಲ್ಲೇಖಿಸಲಾದ ಸ್ವರೂಪದ ವಿಚಾರಣೆಯನ್ನು" ಎಂಬ ಪದಗಳ ತರುವಾಯ "ಈ ಕೆಳಕಂಡ ಸನ್ನಿವೇಶಗಳಲ್ಲೂ ತ್ವರಿತವಾಗಿ ವಿಚಾರಣೆ ನಡೆಸಬಹುದು ಅಥವಾ ನಡೆಸುವಂತೆ ಮಾಡಬಹುದು" ಎಂಬ ಪದಗಳನ್ನು ಸೇರಿಸತಕ್ಕದ್ದು.

**22. 37ನೇ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 37ನೇ ಪ್ರಕರಣದ ಕೊನೆಯಲ್ಲಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಸಾಮಾನ್ಯ ನಿಕಾಯ ತಪ್ಪಿತಸ್ಥರ ವಿರುದ್ಧ ಕ್ರಮ ಜರುಗಿಸಲು ವಿಫಲವಾದಲ್ಲಿ ರಿಜಿಸ್ಟ್ರಾರನು ತಪ್ಪಿತಸ್ಥರ ವಿರುದ್ಧ ಜರುಗಿಸಬೇಕಾದ ಕ್ರಮಗಳ ಬಗ್ಗೆ ನಿರ್ದೇಶನ ನೀಡತಕ್ಕದ್ದು ಹಾಗೂ ಲೋಪದೋಷಗಳು ಸರಿಪಡಿಸುವವರೆಗೂ ಅನುಪಾಲನಾ ಕ್ರಮ ಜಾರಿಗೊಳಿಸತಕ್ಕದ್ದು."

**23. 38ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 38ಎ ಪ್ರಕರಣದ (1)ನೇ ಉಪಪ್ರಕರಣದಲ್ಲಿ **"ಎಲ್ಲಾ ನಿರ್ದೇಶಕರು ರಾಜೀನಾಮೆ ಕೊಟ್ಟಲ್ಲಿ"** ಎಂಬ ಪದಗಳ ನಂತರ **"ಅಥವಾ ಮಂಡಲಿಯ ಪದಾವಧಿ ಮುಕ್ತಾಯವಾಗಿದ್ದು, ನೂತನ ಮಂಡಲಿಯು ರಚನೆಯಾಗಿಲ್ಲದಿದ್ದಲ್ಲಿ"** ಎಂಬ ಪದಗಳನ್ನು ಸೇರಿಸತಕ್ಕದ್ದು.

**24. 39ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 39ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ "ವಿವಾದವನ್ನು ಹೊರತುಪಡಿಸಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ii) (4) ಮತ್ತು (5)ನೇ ಉಪಪ್ರಕರಣಗಳನ್ನು ಬಿಟ್ಟುಬಿಡತಕ್ಕದ್ದು.

**25. 43ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 43ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು. ಎಂದರೆ:–

**"43ಎ ಶುಲ್ಕಗಳು:–** ಸಹಕಾರಿಯು ಇತ್ಯರ್ಥಕ್ಕೆ ಸಲ್ಲಿಸುವ ವ್ಯಾಜ್ಯ ಪ್ರಕರಣಗಳು ಹಾಗೂ ಈ ಅಧಿನಿಯಮದಡಿಯಲ್ಲಿ ಹೊರಡಿಸಲಾದ ಆದೇಶಗಳನ್ನು ಜಾರಿಗೊಳಿಸುವ ಮತ್ತು ವ್ಯಾಜ್ಯಗಳ ಸಂಬಂಧದಲ್ಲಿ ಅರ್ಜಿಗಳೊಂದಿಗೆ ಪಾವತಿಸಬೇಕಾದ ಶುಲ್ಕದ ಮೊತ್ತವನ್ನು ಸಹಕಾರಿಗಳ ರಿಜಿಸ್ಟ್ರಾರನು ಕಾಲಕಾಲಕ್ಕೆ ಅಧಿಸೂಚಿಸತಕ್ಕದ್ದು."

**26. 46ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 46ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು.

"ಪರಂತು, ಹಣಪಾವತಿಗೆ ಸಂಬಂಧಿಸಿದ ಯಾವುದೇ ಆದೇಶ ಅಥವಾ ತೀರ್ಪು ಅಥವಾ ಐತೀರ್ಪಿನ ವಿರುದ್ಧ ಸಲ್ಲಿಸುವ ಮೇಲ್ಮನವಿ ಜೊತೆಯಲ್ಲಿ ಅಂತಹ ಆದೇಶದ, ತೀರ್ಪಿನ ಅಥವಾ ಐತೀರ್ಪಿನ ಪ್ರಕಾರ ಬಾಕಿಯಿರುವ ಅಥವಾ ಪಾವತಿಸಬೇಕಿರುವ ಮೊತ್ತದ ಶೇಕಡ ಇಪ್ಪತ್ತೈದನ್ನು ಸಂಬಂಧಿತ ಸಹಕಾರಿಯಲ್ಲಿ ಠೇವಣಿ ಮಾಡಿರುವ ಬಗ್ಗೆ ತೃಪ್ತಿಕರವಾದ ರುಜುವಾತನ್ನು ಸಲ್ಲಿಸದ ಹೊರತು ಮೇಲ್ಮನವಿ ಪ್ರಾಧಿಕಾರವು ಅಂತಹ ಯಾವುದೇ ಮೇಲ್ಮನವಿಯನ್ನು ಪರಿಗಣಿಸತಕ್ಕದ್ದಲ್ಲ. ಮೇಲ್ಮನವಿಯನ್ನು ಇತ್ಯರ್ಥಗೊಳಿಸಿದ ನಂತರ ಆ ರೀತಿ ಠೇವಣಿ ಮಾಡಿರುವ ಮೊತ್ತವನ್ನು ಮೇಲ್ಮನವಿದಾರನು ಪಾವತಿಸಬೇಕಾದ ಮೊಬಲಗಿನೊಂದಿಗೆ ಹೊಂದಾಣಿಕೆ ಮಾಡತಕ್ಕದ್ದು ಮತ್ತು ಮೇಲ್ಮನವಿದಾರನು ಯಾವುದೇ ಮೊಬಲಗನ್ನು ಪಾವತಿಸಬೇಕಾಗಿಲ್ಲದ ಸಂದರ್ಭದಲ್ಲಿ ಠೇವಣಿ ಮಾಡಿರುವ ಮೊತ್ತವನ್ನು ಸಹಕಾರಿಯು ಅವನಿಗೆ ಹಿಂತಿರುಗಿಸತಕ್ಕದ್ದು."

**27. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53ನೇ ಪ್ರಕರಣದ (9)ನೇ ಉಪಪ್ರಕರಣದಲ್ಲಿ **"ಪ್ರತಿನಿಧಿ"** ಎಂಬ ಪದವು ಬರುವ ಕಡೆಗಳಲ್ಲೆಲ್ಲ **"ಡೆಲಿಗೇಟ್"** ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**28. 53ಬಿ ಹೊಸ ಪ್ರಕರಣದ ಸೇರ್ಪಡೆ:–** ಮೂಲ ಅಧಿನಿಯಮದ 53ಎ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು–

"**53ಬಿ. ನಿರ್ದೇಶಕರುಗಳ ಅನರ್ಹತೆ.–** ಸಂಯುಕ್ತ ಸಹಕಾರಿಯು ಅಧಿನಿಯಮ, ನಿಯಮ ಅನುಸಾರವಾಗಿ ತನ್ನ ಪ್ರಕಾರ್ಯಗಳನ್ನು ನಿರ್ವಹಿಸಲು ವಿಫಲವಾದಲ್ಲಿ ಅಂಥ ವಿಫಲತೆಗೆ ಕಾರಣರಾದವರಿಗೆ ಅಹವಾಲು ಸಲ್ಲಿಸಲು ಅವಕಾಶ ನೀಡಿದ ತರುವಾಯ ರಿಜಿಸ್ಟ್ರಾರನು ಅವರನ್ನು ಅನರ್ಹಗೊಳಿಸತಕ್ಕದ್ದು:

ಪರಂತು, ಶೂನ್ಯಾವಸ್ಥೆವುಂಟಾದಲ್ಲಿ ಅಧಿನಿಯಮದ 38ಎ ಪ್ರಕರಣವನ್ನು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯಿಸತಕ್ಕದ್ದು."

**29. 55ನೇ ಪ್ರಕರಣದ ತಿದ್ದುಪಡಿ .–** ಮೂಲ ಅಧಿನಿಯಮದ 55ನೇ ಪ್ರಕರಣದ (4)ನೇ ಉಪಪ್ರಕರಣದಲ್ಲಿ **"30ನೇ ಪ್ರಕರಣದ (6) ಮತ್ತು (7) ಉಪಪ್ರಕರಣಗಳ ಉಪಬಂಧಗಳು"** ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**30. 64ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 64ನೇ ಪ್ರಕರಣದ ಶಿರೋನಾಮೆಯಲ್ಲಿ **"ಲೆಕ್ಕಪರಿಶೋಧನೆ"** ಎಂಬ ಪದಕ್ಕೆ **"ಸಂಯುಕ್ತ ಸಹಕಾರಿಯ ಲೆಕ್ಕಪರಿಶೋಧನೆ"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**31. 70ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 70ನೇ ಪ್ರಕರಣದಲ್ಲಿ **"ತೊಂದರೆ ಉಂಟಾದರೆ"** ಎಂಬ ಪದಗಳ ತರುವಾಯ "ಅಥವಾ ಸ್ಪಷ್ಟೀಕರಣದ ಅವಶ್ಯವಿದ್ದರೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ನ್ನು (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 17) ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸಲು, ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(i) ತಾಂತ್ರಿಕ ಕಾರಣಗಳ ಮೇಲೆ ಉಪವಿಧಿಗಳನ್ನು ತಿರಸ್ಕರಿಸುವುದು,

(ii) ಉಪವಿಧಿಗಳ ತಿದ್ದುಪಡಿಗಳಿಗಾಗಿ ಶುಲ್ಕವನ್ನು ನಿಗದಿಪಡಿಸಲು,

(iii) ದ್ವಿ ಸದಸ್ಯತ್ವವನ್ನು ತಪ್ಪಿಸುವುದು;

(iv) ಸದಸ್ಯತ್ವವನ್ನು ತಿರಸ್ಕರಿಸಿದ್ದ ಸಂದರ್ಭದಲ್ಲಿ ಅಪೀಲಿಗಾಗಿ ಉಪಬಂಧಗಳು;

(v) ಮತದಾನದ ಹಕ್ಕನ್ನು ದೃಢೀಕರಿಸುವುದು;

(vi) ಸದಸ್ಯೇತರರಿಂದ ಠೇವಣಿಗೇ ಸಂಗ್ರಹದ ಮೇಲೆ ನಿರ್ಭಂಧ

(vii) ಇತರ ಪ್ರಾಸಂಗಿಕ ಮತ್ತು ಅನುಷಂಗಿಕ ತಿದ್ದುಪಡಿಗಳು,

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನ ತಿದ್ದುಪಡಿಯಿಂದ ಯಾವುದೇ ಹಣಕಾಸಿನ ವೆಚ್ಚ ಉಂಟಾಗುವುದಿಲ್ಲ.

## ಪ್ರತ್ಯಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ

| | |
|---|---|
| ಖಂಡ 4 | 6ನೇ ಉಪಖಂಡದ ಮೂಲಕ ಸೇರಿಸಲು ಉದ್ದೇಶಿಸಲಾದ 11ನೇ ಪ್ರಕರಣದ (3)ನೇ ಉಪ ಪ್ರಕರಣವು ಸಹಕಾರಿಯ ಉಪವಿಧಿಗಳ ತಿದ್ದುಪಡಿಗಾಗಿ ಶುಲ್ಕವನ್ನು ನಿಗದಿಪಡಿಸಲು ಸಹಕಾರಿ ಸಂಘಗಳ ರಿಜಿಸ್ಟ್ರಾರನಿಗೆ ಅಧಿಕಾರವನ್ನು ನೀಡುತ್ತದೆ. |
| ಖಂಡ 25 | ಸೇರಿಸಲು ಉದ್ದೇಶಿಸಲಾದ 43ಎ ಪ್ರಕರಣವು ಆದೇಶದ ವಿವಾದ ಮತ್ತು ಜಾರಿಗೊಳಿಸುವುದಕ್ಕಾಗಿ ಶುಲ್ಕವನ್ನು ನಿಗದಿಗೊಳಿಸಲು ಸಹಕಾರಿ ಸಂಘಗಳ ರಿಜಿಸ್ಟ್ರಾರನಿಗೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಹೆಚ್.ಎಸ್.ಮಹದೇವ ಪ್ರಸಾದ್**
ಸಹಕಾರ ಮತ್ತು ಸಕ್ಕರೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

### ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ರ (2000ರ ಕರ್ನಾಟಕ ಅಧಿನಿಯಮ ಸಂಖ್ಯೆ17) ಉದ್ಧೃತ ಭಾಗ

**XX XX XX**

**4. ನೋಂದಣಿ ಮಾಡಬಹುದಾದ ಸಹಕಾರಿಗಳು.– XX XX XX**

(2) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು,-

(ಎ) ಬೇರೆ ಬೇರೆ ಕುಟುಂಬಗಳಿಗೆ ಸೇರಿದ ಹತ್ತು ಜನರಿಗಿಂತ ಕಡಿಮೆಯಲ್ಲದ ವ್ಯಕ್ತಿಗಳು ಸಹಕಾರಿಯನ್ನು ರಚಿಸಲು ಉದ್ದೇಶಿಸಿದರೆ; ಅಥವಾ

(ಬಿ) ಒಂದು ಸಹಕಾರಿ ಸಂಘವು ಈ ಅಧಿನಿಯಮದ ಅಡಿ ಸಹಕಾರಿಯಾಗಿ ಪರಿವರ್ತಿತವಾಗಲು, ಈ ಸಂಬಂಧದಲ್ಲಿ ಒಂದು ನಿರ್ಣಯವನ್ನು ಅಂಗೀಕರಿಸುವ ಮೂಲಕ ಉದ್ದೇಶಿಸಿದರೆ; ಅಥವಾ

(ಸಿ) ಈ ಅಧಿನಿಯಮದ ಅಡಿ ನೋಂದಾಯಿತವಾದ ಐದು ಅಥವಾ ಅದಕ್ಕೂ ಹೆಚ್ಚಿನ ಸಹಕಾರಿಗಳು ಒಂದು ಒಕ್ಕೂಟ ಸಹಕಾರಿಯಾಗಲು ಈ ಸಂಬಂಧದಲ್ಲಿ ಒಂದು ನಿರ್ಣಯವನ್ನು ಅಂಗೀಕರಿಸುವ ಮೂಲಕ ಉದ್ದೇಶಿಸಿದರೆ,

– ಅಂಥವುಗಳನ್ನು ಈ ಅಧಿನಿಯಮದ ಅಡಿ ಸಹಕಾರಿಯೆಂಬುದಾಗಿ ನೋಂದಾಯಿಸಬಹುದು.

ಪರಂತು, ಯಾವುದೇ ಸಹಕಾರಿಯು ಆರ್ಥಿಕವಾಗಿ ಅಭದ್ರವಾಗುವ ಸಂಭವವಿದ್ದರೆ ಅಥವಾ ಅದನ್ನು ನೋಂದಣಿ ಮಾಡುವುದರಿಂದ ಸಹಕಾರಿ ಚಳವಳಿಯ ಅಭಿವೃದ್ಧಿಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತದೆ ಎಂದು ಕಂಡು ಬಂದರೆ ಅದು ನೋಂದಾಯಿತವಾಗತಕ್ಕದ್ದಲ್ಲ;

ಮತ್ತು ಪರಂತು, ಯಾವುದೇ ಸಹಕಾರಿಯು, ಈ ಅಧಿನಿಯಮದ ಅಡಿಯಲ್ಲಿ ಒಂದು ಗೃಹ ನಿರ್ಮಾಣ ಸಹಕಾರಿಯಾಗಿ ನೋಂದಾಯಿತವಾಗತಕ್ಕದ್ದಲ್ಲ ಮತ್ತು ಯಾವುದೇ ಗೃಹ ನಿರ್ಮಾಣ ಸಹಕಾರ ಸಂಘವು ಗೃಹ ನಿರ್ಮಾಣ ಸಹಕಾರಿಯಾಗಿ ಪರಿವರ್ತಿತವಾಗತಕ್ಕದ್ದಲ್ಲ.

**XX XX XX**

11. **ಉಪವಿಧಿಗಳ ತಿದ್ದುಪಡಿ –**

**XX XX XX**

(2) ಸಹಕಾರಿಯು ತನ್ನ ಉಪವಿಧಿಯನ್ನು ತಿದ್ದುಪಡಿ ಮಾಡಿದ ಸಂದರ್ಭದಲ್ಲಿ, ತಿದ್ದುಪಡಿಯ ನೋಂದಣಿಗಾಗಿ (3)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ವಿವರಗಳೊಂದಿಗೆ ನಿರ್ಣಯದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ರಿಜಿಸ್ಟ್ರಾರನಿಗೆ ರಿಜಿಸ್ಟರ್ಡ್ ಅಂಚೆಯ ಮೂಲಕ ಕಳುಹಿಸತಕ್ಕದ್ದು.

(3) (2)ನೇ ಉಪ–ಪ್ರಕರಣದ ಅಡಿಯಲ್ಲಿ ರಿಜಿಸ್ಟ್ರಾರನಿಗೆ ಕಳುಹಿಸಲಾದ ಪ್ರತಿಯೊಂದು ಅರ್ಜಿಯನ್ನು ಅಧ್ಯಕ್ಷ ಅಥವಾ ಸಭಾಪತಿಯು ಸಹಿ ಮಾಡಿರತಕ್ಕದ್ದು ಮತ್ತು ತಿದ್ದುಪಡಿಯನ್ನು ಅಳವಡಿಸಿಕೊಳ್ಳುವ ನಿರ್ಣಯದ ಮೂರು ಪ್ರತಿಗಳೊಂದಿಗೆ ಈ ಮುಂದಿನ ವಿವರಗಳು ಅರ್ಜಿಯೊಂದಿಗಿರತಕ್ಕದ್ದು, ಎಂದರೆ,–

(ಎ) ತಿದ್ದುಪಡಿಯನ್ನು ಅನುಮೋದಿಸಿದಂಥ ಸಭೆ ನಡೆದ ದಿನಾಂಕ;

(ಬಿ) ಅಂಥ ಸಭೆಯ ದಿನಾಂಕದಂದು ಸಹಕಾರಿಯ ಪಟ್ಟಿಯಲ್ಲಿರುವ ಮತ ನೀಡಲು ಅರ್ಹರಾಗಿದ್ದ ಸದಸ್ಯರ ಒಟ್ಟು ಸಂಖ್ಯೆ, ಸಭೆಯಲ್ಲಿ ಹಾಜರಿದ್ದ ಸದಸ್ಯರ ಸಂಖ್ಯೆ ಮತ್ತು ನಿರ್ಣಯಕ್ಕೆ ಮತ ನೀಡಿದ ಅರ್ಹ ಸದಸ್ಯರ ಸಂಖ್ಯೆ.

(ಸಿ) ಸಹಕಾರಿ ಬ್ಯಾಂಕಿನ ಸಂದರ್ಭದಲ್ಲಿ, ಪ್ರಸ್ತಾವಿತ ತಿದ್ದುಪಡಿಗಳು 10ನೇ ಪ್ರಕರಣದ (3)ನೇ ಉಪ–ಪ್ರಕರಣಕ್ಕೆ ಅನುಸಾರವಾಗಿವೆ ಎಂದು ತಿಳಿಸಿ ಅಧ್ಯಕ್ಷ ಅಥವಾ ಸಭಾಪತಿಯು ಸಹಿ ಮಾಡಿದ ಒಂದು ಪ್ರಮಾಣ ಪತ್ರ.

**XX XX XX**

**17. ನಿಧಿಗಳ ಸಂಗ್ರಹಣೆ.**- ಒಂದು ಸಹಕಾರಿಯು,-

(i) ಅದರ ಸದಸ್ಯರಿಂದ; ಅಥವಾ

(ii) ಇತರ ಯಾವನೇ ವ್ಯಕ್ತಿಯಿಂದ, ಸಂಸ್ಥೆಗಳಿಂದ ಅಥವಾ ಸಂಘಗಳಿಂದ,

-ಅಂಥ ಸಹಕಾರಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದ ಅಂಥ ವ್ಯಾಪ್ತಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು, ಷೇರು ಬಂಡವಾಳ, ಠೇವಣಿಗಳು, ಡಿಬೆಂಚರುಗಳು, ಸಾಲಗಳು ಮತ್ತು ಇತರ ವಂತಿಗೆಗಳ ಯಾವುದೇ ರೂಪದಲ್ಲಿ ನಿಧಿಗಳನ್ನು ಸಂಗ್ರಹಿಸಬಹುದು:

ಪರಂತು, ಒಂದು ಸಹಕಾರಿಯು, ಸರ್ಕಾರದಿಂದ ಅಥವಾ ಸರ್ಕಾರದ ಖಾತರಿಯಿಂದ ಯಾವುದೇ ಸಾಲ, ಸಹಾಯಧನ, ಅನುದಾನ ಅಥವಾ ಯಾವುದೇ ರೂಪದಲ್ಲಿ ಆರ್ಥಿಕ ನೆರವನ್ನು ಪಡೆಯಲು ಅರ್ಹವಾಗಿರತಕ್ಕದ್ದಲ್ಲ.

ಮತ್ತು ಪರಂತು, ಮೊದಲನೇ ಪರಂತುಕದಲ್ಲಿ ಇರುವುದಾವುದೂ, ಒಂದು ಸಹಕಾರಿ ಬ್ಯಾಂಕಿಗೆ ಅನ್ವಯವಾಗತಕ್ಕದ್ದಲ್ಲ.

**XX XX XX**

20. **ಸದಸ್ಯನನ್ನಾಗಿ ಸೇರಿಸಿಕೊಳ್ಳಬಹುದಾದ ಮತ್ತು ಮುಂದುವರೆಸಬಹುದಾದ ವ್ಯಕ್ತಿಗಳು.–**

**XX XX XX**

(1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಯಾರೇ ವ್ಯಕ್ತಿಯನ್ನು, ಎಂದರೆ–

**XX XX XX**

(ಬಿ) ಅವನು ಯಾವುದೇ ವ್ಯವಹಾರವನ್ನು ನಡೆಸುತ್ತಿದ್ದು, ಅಂಥ ವ್ಯವಹಾರವು ಸಹಕಾರಿಯ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದ ವ್ಯವಹಾರಗಳಿಗೆ ವಿರುದ್ಧವಾಗಿರುವಲ್ಲಿ ಅಥವಾ ಸ್ಪರ್ಧಾತ್ಮಕವಾಗಿರುವಲ್ಲಿ; ಮತ್ತು

**XX XX XX**

**21ಎ. ನಾಮ ಮಾತ್ರ ಸದಸ್ಯರು.**–(1) ಒಂದು ಸಹಕಾರಿಯು ಅದರ ಹಿತಾಸಕ್ತಿಯಲ್ಲಿ,–

**XX XX XX**

(ಬಿ) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ರಚಿತವಾದ ಯಾವುದೇ ಫರ್ಮು, ಕಂಪನಿ, ಸಹಕಾರ ಸಂಘ, ಸಹಕಾರಿ ಅಥವಾ ಯಾವುದೇ ನಿಕಾಯ ಅಥವಾ ನಿಗಮವನ್ನು,

**XX XX XX**

ಮತ್ತೂ ಪರಂತು, 20ನೇ ಪ್ರಕರಣದ ಅಡಿಯಲ್ಲಿ ಸದಸ್ಯತ್ವಕ್ಕೆ ಅರ್ಹನಿದ್ದ ವ್ಯಕ್ತಿಯನ್ನು ನಾಮಮಾತ್ರ ಸದಸ್ಯನೆಂದು ಸೇರಿಸಿಕೊಳ್ಳತಕ್ಕದ್ದಲ್ಲ.

**XX XX XX**

23. ಸಾಮಾನ್ಯ ನಿಕಾಯ.–

**XX** **XX** **XX**

(3) ಈ ಅಧಿನಿಯಮದ, ನಿಯಮಗಳ ಮತ್ತು ಉಪವಿಧಿಗಳ ಇತರ ಉಪಬಂಧಗಳಿಗೊಳಪಟ್ಟು ಸಾಮಾನ್ಯ ನಿಕಾಯವು ಈ ಮುಂದಿನ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು, ಎಂದರೆ–

**XX** **XX** **XX**

(**ಕೆ**–4) ಮಂಡಲಿಯು ಶಿಸ್ತಿನ ವಿಚಾರಣೆ ನಡೆಸಿ ಸೇವೆಯಿಂದ ತೆಗೆದುಹಾಕಿದ ಅಥವಾ ವಜಾ ಮಾಡಿದ ಅಥವಾ ಕೊನೆಗೊಳಿಸಿದ ಅಥವಾ ಯಾವುದೇ ಕಠಿಣ ದಂಡನೆಗೆ ಒಳಗಾದ ನೌಕರನ ಅಪೀಲಿನ ಬಗ್ಗೆ ತೀರ್ಮಾನ;

**XX** **XX** **XX**

**23ಬಿ.– ಪ್ರಾತಿನಿಧಿಕ ಸಾಮಾನ್ಯ ನಿಕಾಯದ ಸಭೆ,–** ಯಾವುದೇ ಪ್ರಾಥಮಿಕ ಅಥವಾ ಮಾಧ್ಯಮಿಕ ಸಹಕಾರಿಯ ಸದಸ್ಯತ್ವದ ಸಂಖ್ಯೆಯು ಮೂರು ಸಾವಿರಕ್ಕೆ ಮೀರಿದ್ದಲ್ಲಿ ಅಥವಾ ಅದರ ಕಾರ್ಯಕ್ಷೇತ್ರವು ಒಂದು ತಾಲ್ಲೂಕಿಗಿಂತ ಹೆಚ್ಚಾಗಿದ್ದಲ್ಲಿ ಅಂಥ ಸಹಕಾರಿಯ ಸಾಮಾನ್ಯ ಸಭೆಯು ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಸಾಮಾನ್ಯ ನಿಕಾಯದ ಯಾವುದೇ ಅಥವಾ ಎಲ್ಲಾ ಅಧಿಕಾರಗಳನ್ನು ಹಾಗೂ ಈ ಅಧಿನಿಯಮದಲ್ಲಿ ಸಾಮಾನ್ಯ ನಿಕಾಯ ಅಥವಾ ಅದರ ಸಭೆಗೆ ಯಾವುದೇ ರೂಪದಲ್ಲಿ ಅಥವಾ ಪದಗಳಲ್ಲಿ ಮಾಡಲಾದ ಯಾವುದೇ ಉಲ್ಲೇಖವು, ಅಂಥ ಉಲ್ಲೇಖವು ಪ್ರಾತಿನಿಧಿಕ ಸಾಮಾನ್ಯ ನಿಕಾಯ ಅಥವಾ ಸಂದರ್ಭಾನುಸಾರವಾಗಿ ಅದರ ಸಭೆಗೆ ಮಾಡಿದ ಉಲ್ಲೇಖಗಳ ಬಗ್ಗೆ ಅಧಿಕಾರಗಳನ್ನು ಚಲಾಯಿಸಲು ನಿಯಮಿಸಬಹುದಾದಂತೆ ಆಯ್ಕೆ ಮಾಡಲಾದ ನಿಗದಿತ ಸಂಖ್ಯೆಯ ಸದಸ್ಯರನ್ನೊಳಗೊಂಡ (ಇಲ್ಲಿ ಇನ್ನು ಮುಂದೆ ಪ್ರಾತಿನಿಧಿಕ ಸಾಮಾನ್ಯ ನಿಕಾಯ ಎಂದು ಉಲ್ಲೇಖಿಸಲಾದ) ಒಂದು ಚಿಕ್ಕ ನಿಕಾಯವನ್ನು ರಚಿಸಲು ಉಪಬಂಧಿಸಿ ಸಹಕಾರಿ ಉಪವಿಧಿಗಳನ್ನು ತಿದ್ದುಪಡಿ ಮಾಡಬಹುದು.

**XX** **XX** **XX**

**24. ಮಂಡಲಿಯ ರಚನೆ.–** ಪ್ರತಿಯೊಂದು ಸಹಕಾರಿಯ ಮಂಡಲಿಯು ಮುಖ್ಯಕಾರ್ಯನಿರ್ವಾಹಕನನ್ನು ಹೊರತುಪಡಿಸಿ ಹನ್ನೊಂದಕ್ಕಿಂತ ಕಡಿಮೆಯಿಲ್ಲದ, ಆದರೆ ಕೆಳಗೆ ನಿರ್ದಿಷ್ಟಪಡಿಸಿದಷ್ಟು ಸಂಖ್ಯೆಗಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(1) ಪ್ರಾಥಮಿಕ ಮತ್ತು ಮಾಧ್ಯಮಿಕ ಸಹಕಾರಿಯ ಕಾರ್ಯಕ್ಷೇತ್ರವು–

**XX** **XX** **XX**

ಅಲ್ಲದೇ ಪರಂತು, ಒಂದು ಸಹಕಾರಿಯ ಮೂರಕ್ಕೆ ಮೀರದ ಕಾರ್ಯಾನುಗುಣ ನಿರ್ದೇಶಕರು (functional directors) ಸಹ ಆಡಳಿತ ಮಂಡಲಿಯ ಸದಸ್ಯರಾಗಿರತಕ್ಕದ್ದು, ಹಾಗೂ (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಒಟ್ಟು ನಿರ್ದೇಶಕರ ಸಂಖ್ಯೆಯನ್ನು ಎಣಿಸುವಾಗ ಅಂತಹ ಕಾರ್ಯಾನುಗುಣ ನಿರ್ದೇಶಕರನ್ನು ಹೊರತುಪಡಿಸತಕ್ಕದ್ದು.

**XX** **XX** **XX**

**25. ನಿರ್ದೇಶಕನಾಗಿ ಚುನಾಯಿತನಾಗಲು ಅಥವಾ ಮುಂದುವರೆಯಲು ಇರುವ ಅನರ್ಹತೆ–**

(1) ಒಬ್ಬ ವ್ಯಕ್ತಿಯು,–

**XX** **XX** **XX**

(ಎಫ್) (2)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದಂತೆ ಯಾವುವೇ ಅನರ್ಹತೆಗಳಿಗೆ ಗುರಿಯಾದರೆ,

–ಅಂಥ ವ್ಯಕ್ತಿಯು ನಿರ್ದೇಶಕನಾಗಿ ಚುನಾಯಿತನಾಗಲು ಅಥವಾ ಮುಂದುವರೆಯಲು ಅನರ್ಹನಾಗತಕ್ಕದ್ದು. ಹಾಗೂ ಅನರ್ಹತೆಗೆ ಗುರಿಯಾದ ದಿನಾಂಕದಿಂದ ಐದು ವರ್ಷಗಳ ಅವಧಿಯವರೆಗೆ ಸದರಿ ಸಹಕಾರಿಯ ನಿರ್ದೇಶಕರಾಗಿ ಚುನಾಯಿತರಾಗಲು ಅಥವಾ ಮುಂದುವರೆಯಲು ಅನರ್ಹರಾಗಿರತಕ್ಕದ್ದು.

**XX** **XX** **XX**

(2) ನಿರ್ದೇಶಕರುಗಳೆಲ್ಲರೂ, ಸಹಕಾರಿಯ ನಿರ್ದೇಶಕರ ಹುದ್ದೆಯ ಪದಾವಧಿಯಲ್ಲಿ–

(ಎ) ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಲಾಗಿರುವ ಸಮಯದೊಳಗೆ ಮತ್ತು 24ನೇ ಪ್ರಕರಣದಲ್ಲಿ ಗೊತ್ತುಪಡಿಸಲಾದ ಅವಧಿ ಮುಕ್ತಾಯವಾಗುವುದಕ್ಕೆ ಮೊದಲು ಚುನಾವಣೆಗಳನ್ನು ನಡೆಸದಿದ್ದರೆ; ಅಥವಾ

**XX** **XX** **XX**

–ಅನರ್ಹತೆಗೆ ಗುರಿಯಾಗತಕ್ಕದ್ದು ಮತ್ತು ಹಾಗೆ ಅನರ್ಹತೆಗೆ ಗುರಿಯಾದ ದಿನಾಂಕದಿಂದ ಐದು ವರ್ಷಗಳ ಅವಧಿಯವರೆಗೆ ಒಂದು ಸಹಕಾರಿಯ ನಿರ್ದೇಶಕರಾಗಿ ಚುನಾಯಿತರಾಗಲು ಮತ್ತು ಆ ಸಹಕಾರಿಯ ಅಥವಾ ಇತರ ಯಾವುದೇ ಸಹಕಾರಿಯ ನಿರ್ದೇಶಕರಾಗಿ ಮುಂದುವರಿಯಲೂ ಸಹ ಅನರ್ಹರಾಗಿರತಕ್ಕದ್ದು.

**XX** **XX** **XX**

26 ಮಂಡಲಿಯ ಚುನಾವಣೆ.– (1)– **XX** **XX** **XX**

(4) ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಯಾವುದೇ ಸಹಕಾರಿಯ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, 2013 ರ ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ಬಾಕಿಯಿರುವ ಪ್ರತಿ ಸಹಕಾರಿಯ ಆಡಳಿತ ಮಂಡಲಿಗೆ ಚುನಾವಣೆಯನ್ನು ಮತ್ತು ತತ್ಪರಿಣಾಮದ ಪದಾಧಿಕಾರಿಗಳ ಚುನಾವಣೆಯನ್ನು;

**XX XX XX**

ಪರಂತು, ಅಂಥ ಪ್ರತಿ ಸಹಕಾರಿಯ ನಿರ್ಗಮಿಸುತ್ತಿರುವ ಆಡಳಿತ ಮಂಡಲಿಯು ಮೇಲಿನಂತೆ ಚುನಾವಣೆಯನ್ನು ನಡೆಸುವ ದಿನಾಂಕದವರೆಗೂ ತನ್ನ ಪದದಲ್ಲಿ ಮುಂದುವರಿಯತಕ್ಕದ್ದು.

**XX XX XX**

**28. ಪದಾಧಿಕಾರಿಗಳನ್ನು ಚುನಾಯಿಸುವುದು.– XX XX XX**

(3) ಅಧ್ಯಕ್ಷ ಅಥವಾ ಸಭಾಪತಿ, ಉಪಾಧ್ಯಕ್ಷ ಅಥವಾ ಉಪಸಭಾಪತಿಯ ಪದಾವಧಿಯು ಚುನಾವಣೆ ದಿನಾಂಕದಿಂದ ಎರಡೂವರೆ ವರ್ಷಗಳಾಗಿರತಕ್ಕದ್ದು.

**30. ಸಭೆಗಳು.–**

**XX XX XX**

(4) ಯಾವುದೇ ಸಾಮಾನ್ಯ ಸಭೆಯ ಕೋರಂ ಉಪವಿಧಿಗಳಲ್ಲಿ ನಿಗದಿಪಡಿಸಬಹುದಾದಷ್ಟು ಇರತಕ್ಕದ್ದು. ಆದರೆ ಅಂತಹ ಕೋರಂ ಸಾಮಾನ್ಯ ನಿಕಾಯದ ಒಟ್ಟು ಮತದಾನ ಹಕ್ಕುಳ್ಳ ಸದಸ್ಯರ ಶೇಕಡ ಇಪ್ಪತ್ತಕ್ಕಿಂತ ಕಡಿಮೆ ಇರತಕ್ಕದ್ದಲ್ಲ ಹಾಗೂ ಪ್ರಾತಿನಿಧಿಕ ಸಾಮಾನ್ಯ ಸಭೆಯ ಕೋರಂ ಸಾಮಾನ್ಯ ನಿಕಾಯದ ಒಟ್ಟು ಮತದಾನದ ಹಕ್ಕುಳ್ಳ ಪ್ರತಿನಿಧಿಗಳ ಶೇಕಡ ಅರವತ್ತಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ಯಾವುದೇ ಸಾಮಾನ್ಯ ಸಭೆಯಲ್ಲಿ ಯಾವುದೇ ಕಲಾಪದ ಚರ್ಚೆಯ ಸಮಯದಲ್ಲಿ ಕೋರಂ ಇಲ್ಲದಿದ್ದ ಪಕ್ಷದಲ್ಲಿ, ಅಂಥ ಸಭೆಯ ಕಲಾಪವನ್ನು ನಡೆಸತಕ್ಕದ್ದಲ್ಲ.

**XX XX XX**

**33. ಲೆಕ್ಕಪರಿಶೋಧನೆ.–** (1) ಪ್ರತಿಯೊಂದು ಸಹಕಾರಿಯು ಕನಿಷ್ಠ ವರ್ಷಕ್ಕೊಮ್ಮೆಯಾದರು ತನ್ನ ಲೆಕ್ಕಪತ್ರಗಳನ್ನು ಪ್ರತಿ ಸಹಕಾರಿ ವರ್ಷದ ಮುಕ್ತಾಯದ ನಂತರ ಮುಂಬರುವ ಸೆಪ್ಟಂಬರ್ ತಿಂಗಳ ಒಂದರೊಳಗಾಗಿ ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ಅನುಮೋದಿಸಿದ ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧಿಸುವ ಸಂಸ್ಥೆಗಳ ಪಟ್ಟಿಯಲ್ಲಿರುವ ಹಾಗೂ ಸದರಿ ಸಹಕಾರಿಯ ಸಾಮಾನ್ಯ ನಿಕಾಯದಿಂದ ನೇಮಕವಾದ ಲೆಕ್ಕಪರಿಶೋಧಕರಿಂದ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯಿಂದ ಪರಿಶೋಧನೆ ಮಾಡಿಸತಕ್ಕದ್ದು.

ಪರಂತು ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ರಾಜ್ಯದಲ್ಲಿರುವ ಸಹಕಾರಿಗಳ ಲೆಕ್ಕ ಪತ್ರಗಳನ್ನು ಪರಿಶೋಧಿಸಲು ನಿಗದಿಪಡಿಸಿದ ವಿದ್ಯಾರ್ಹತೆ ಮತ್ತು ಅನುಭವಗಳನ್ನು ಹೊಂದಿರುವ ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧಿಸುವ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲು ಮತ್ತು ನಿರ್ವಹಿಸಲು ಸಕ್ಷಮನಾದ ಪ್ರಾಧಿಕಾರವಾಗಿರತಕ್ಕದ್ದು.

ಮತ್ತು ಪರಂತು ಸಹಕಾರ ವರ್ಷವು ಮುಕ್ತಾಯವಾದ ಮೂವತ್ತು ದಿನಗಳೊಳಗೆ ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ಹತ್ತಕ್ಕೆ ಮೀರದಂಥ ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧಿಸುವ ಸಂಸ್ಥೆಗಳ ತಂಡದ ಪಟ್ಟಿಯನ್ನು ಪ್ರತಿಯೊಂದು ಸಹಕಾರಿಗೆ ಕಳುಹಿಸತಕ್ಕದ್ದು.

(2) ಪ್ರತಿಯೊಂದು ಸಹಕಾರಿಯ ಸಾಮಾನ್ಯ ನಿಕಾಯವು ತನ್ನ ಸಾಮಾನ್ಯ ಸಭೆಯಲ್ಲಿ ಸದರಿ ಸಹಕಾರಿಯ ಆ ಸಹಕಾರ ವರ್ಷದ ಲೆಕ್ಕಪತ್ರಗಳನ್ನು ಪರಿಶೋಧಿಸಲು ಒಬ್ಬ ಲೆಕ್ಕಪರಿಶೋಧಕನನ್ನು ಅಥವಾ ಒಂದು ಲೆಕ್ಕಪರಿಶೋಧಿಸುವ ಸಂಸ್ಥೆಯನ್ನು ನೇಮಿಸತಕ್ಕದ್ದು.

**XX XX XX**

(19) ಯಾವುದೇ ಸಹಕಾರಿಯ ಲೆಕ್ಕಪರಿಶೋಧಕನ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯ ಸಂಭಾವನೆಯನ್ನು ಅದರ ಸಾಮಾನ್ಯ ನಿಕಾಯವು ನಿಗದಿಪಡಿಸುವ ದರದಲ್ಲಿ ಸಹಕಾರಿಯು ಭರಿಸತಕ್ಕದ್ದು.

**ವಿವರಣೆ: ಈ ಪ್ರಕರಣದ ಉದ್ದೇಶಕ್ಕಾಗಿ,**

(i) **'ಲೆಕ್ಕಪರಿಶೋಧಕ'** ಎಂದರೆ ತನ್ನ ಪದವಿ ಅಥವಾ ಸ್ನಾತಕೋತ್ತರ ಪದವಿಯ ಜೊತೆಗೆ ಸಹಕಾರಿ ವ್ಯವಸ್ಥಾಪನೆಯಲ್ಲಿ ಉನ್ನತ ಡಿಪ್ಲೋಮಾ ಅಥವಾ ಸಹಕಾರಿ ಲೆಕ್ಕಪರಿಶೋಧನೆಯಲ್ಲಿ ಡಿಪ್ಲೋಮಾ ಅಥವಾ ಸಹಕಾರಿ ವ್ಯವಸ್ಥಾಪನೆಯಲ್ಲಿ ಸಾಮಾನ್ಯ ಡಿಪ್ಲೋಮಾದಲ್ಲಿ ತೇರ್ಗಡೆಯಾಗಿರುವ ಮತ್ತು ಪ್ರೊಬೇಷನರಿ ಅವಧಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರುವ ಕನ್ನಡ ಭಾಷೆಯ ವ್ಯವಹಾರ ಜ್ಞಾನವುಳ್ಳ ಸಹಕಾರ ಲೆಕ್ಕಪರಿಶೋಧನಾ ಇಲಾಖೆಯ ಒಬ್ಬ ಲೆಕ್ಕಪರಿಶೋಧಕ ಅಥವಾ ಒಬ್ಬ ಅಧಿಕಾರಿ; ಅಥವಾ

ಕೊನೇ ಪಕ್ಷ ಮೂರು ವರ್ಷಗಳ ಲೆಕ್ಕಪರಿಶೋಧನೆ ಮಾಡಿರುವ ಅನುಭವವುಳ್ಳ ಮತ್ತು ಸಹಕಾರಿ ಸಂಸ್ಥೆಗಳ ಕಾರ್ಯನಿರ್ವಹಣೆ ಬಗ್ಗೆ ಸಾಮಾನ್ಯ ತಿಳುವಳಿಕೆಯುಳ್ಳ ಹಾಗೂ ಪಟ್ಟಿಯಲ್ಲಿ ಸೇರ್ಪಡೆಯಾಗುವ ಇಚ್ಛೆವುಳ್ಳ ಚಾರ್ಟರ್ಡ್ ಲೆಕ್ಕಿಗರ ಅಧಿನಿಯಮ 1949 ರ ಅರ್ಥ ವಿವರಣೆಯಲ್ಲಿ ಬರುವ ಒಬ್ಬ ಸನ್ನದು ಲೆಕ್ಕಿಗ ಹಾಗೂ ಅಂತಹ ಸನ್ನದು ಲೆಕ್ಕಿಗನು ಕಾರ್ಯನಿರ್ವಹಣೆಗೆ ಸಾಕಾಗುವಷ್ಟು ಕನ್ನಡ ಭಾಷೆಯ ಜ್ಞಾನ ಹಾಗೂ ತಿಳುವಳಿಕೆಯನ್ನು ಹೊಂದಿರತಕ್ಕದ್ದು.

(ii) **"ಲೆಕ್ಕಪರಿಶೋಧಿಸುವ ಸಂಸ್ಥೆ"** ಎಂದರೆ ಕೊನೇ ಪಕ್ಷ ಮೂರು ವರ್ಷಗಳ ಲೆಕ್ಕಪರಿಶೋಧನೆ ಮಾಡಿರುವ ಅನುಭವವುಳ್ಳ ಮತ್ತು ಸಹಕಾರಿ ಸಂಸ್ಥೆಗಳ ಕಾರ್ಯನಿರ್ವಹಣೆ ಬಗ್ಗೆ ಸಾಮಾನ್ಯ ತಿಳುವಳಿಕೆಯುಳ್ಳ ಹಾಗೂ ಪಟ್ಟಿಯಲ್ಲಿ ಸೇರ್ಪಡೆಯಾಗುವ ಇಚ್ಛೆವುಳ್ಳ ಚಾರ್ಟರ್ಡ್ ಲೆಕ್ಕಿಗರ ಅಧಿನಿಯಮ 1949 ರ ಅರ್ಥ ವಿವರಣೆಯಲ್ಲಿ ಬರುವ ಒಬ್ಬರಿಗಿಂತ ಹೆಚ್ಚಿನ ಚಾರ್ಟರ್ಡ್ ಲೆಕ್ಕಿಗರ ಒಂದು ಸಂಸ್ಥೆ ಹಾಗೂ ಅಂತಹ ಚಾರ್ಟರ್ಡ್ ಲೆಕ್ಕಿಗರು ಕಾರ್ಯನಿರ್ವಹಣೆಗೆ ಸಾಕಾಗುವಷ್ಟು ಕನ್ನಡ ಭಾಷೆಯ ಜ್ಞಾನ ಹಾಗೂ ತಿಳುವಳಿಕೆಯನ್ನು ಹೊಂದಿರತಕ್ಕದ್ದು.

**xx** **xx** **xx**

35. ವಿಚಾರಣೆ.- (1) ರಿಜಿಸ್ಟ್ರಾರನು, ಒಂದು ಸಹಕಾರಿಯ ರಚನೆ, ವ್ಯವಸ್ಥಾಪನೆ, ಕಾರ್ಯನಿರ್ವಹಣೆ ಅಥವಾ ಹಣಕಾಸಿನ ಪರಿಸ್ಥಿತಿಗಳಿಗೆ ಸಂಬಂಧಿಸಿದ ಯಾವುದೇ ನಿರ್ದಿಷ್ಟ ವಿಷಯವನ್ನು ಕುರಿತು ತ್ವರಿತವಾಗಿ ವಿಚಾರಣೆ ನಡೆಸಬಹುದು ಅಥವಾ ವಿಚಾರಣೆ ನಡೆಸುವಂತೆ ಮಾಡಬಹುದು.

(2) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಸ್ವರೂಪದ ವಿಚಾರಣೆಯನ್ನು,-

**xx** **xx** **xx**

**37. ವಿಚಾರಣಾ ವರದಿಯ ಬಗ್ಗೆ ಕ್ರಮ.**- ರಿಜಿಸ್ಟ್ರಾರನಿಗೆ, ಅಂಥ ವಿಚಾರಣೆಯ ನಂತರ, ಯಾವೊಬ್ಬ ಅಥವಾ ಎಲ್ಲ ಪದಾಧಿಕಾರಿಗಳು ಅಥವಾ ನಿರ್ದೇಶಕರು ಅಥವಾ ಮುಖ್ಯ ಕಾರ್ಯನಿರ್ವಾಹಕರು ವೈಯಕ್ತಿಕವಾಗಿ ಅಥವಾ ಜಂಟಿಯಾಗಿ, ಅಧಿನಿಯಮಕ್ಕೆ, ನಿಯಮಗಳಿಗೆ ಅಥವಾ ಉಪವಿಧಿಗಳಿಗೆ ವಿರುದ್ಧವಾಗಿ ಸಂದಾಯಗಳನ್ನು ಮಾಡಿದ್ದಾರೆಂದು ಮತ್ತು ವಿಶ್ವಾಸದ್ರೋಹ ಅಥವಾ ನಿರ್ಲಕ್ಷ್ಯದಿಂದ ಸಹಕಾರಿಯ ಸ್ವತ್ತುಗಳಿಗೆ ನಷ್ಟ ಅಥವಾ ಕೊರತೆಯನ್ನುಂಟು ಮಾಡಿದ್ದಾರೆಂದು ಅಥವಾ ಅಂಥ ಸಹಕಾರಿಗೆ ಸೇರಿದ ಯಾವುದೇ ಹಣ ಅಥವಾ ಆಸ್ತಿಯನ್ನು ದುರುಪಯೋಗ ಪಡಿಸಿಕೊಂಡಿದ್ದಾರೆಂದು ಅಥವಾ ಮೋಸದಿಂದ ಉಳಿಸಿಕೊಂಡಿದ್ದಾರೆಂದು ಮನದಟ್ಟಾದರೆ, ಅವರು ಬದ್ಧರಾಗಬಹುದಾದ ಯಾವುವೇ ಸಿವಿಲ್ ಅಥವಾ ಕ್ರಿಮಿನಲ್ ವ್ಯವಹರಣೆಗಳಿಗೆ ಪ್ರತಿಕೂಲವಾಗದಂತೆ, ವಿಚಾರಣಾ ವರದಿಯ ನಿರ್ಣಯಗಳನ್ನು ಚರ್ಚಿಸುವುದಕ್ಕಾಗಿ ಮತ್ತು ಸಂಬಂಧಪಟ್ಟವರ ವಿರುದ್ಧ ಅವಶ್ಯ ಕ್ರಮ ಕೈಗೊಳ್ಳಲು, ಸಂದರ್ಭಾನುಸಾರ, ರಿಜಿಸ್ಟ್ರಾರನಿಗೆ ನಿರ್ದಿಷ್ಟಪಡಿಸುವ ಅಂಥ ಸೂಕ್ತ ಸಮಯದೊಳಗೆ ಸಾಮಾನ್ಯ ಸಭೆಯನ್ನು ಕರೆಯುವಂತೆ ಮಂಡಲಿಗೆ ನಿರ್ದೇಶಿಸತಕ್ಕದ್ದು.

**xx** **xx** **xx**

**38ಎ ವಿಶೇಷಾಧಿಕಾರಿಯ ನೇಮಕ.**- (1) ನಿರ್ದೇಶಕರ ಅನರ್ಹತೆ, ರಾಜೀನಾಮೆ ಅಥವಾ ಮರಣ ಅಥವಾ ಅವರನ್ನು ತೆಗೆದುಹಾಕಿರುವುದರಿಂದ ಮಂಡಲಿಯ ಸದಸ್ಯರ ಸಂಖ್ಯೆಯು ಅಗತ್ಯವಿರುವ ಕೋರಂ ಸಂಖ್ಯೆಗಿಂತ ಕಡಿಮೆ ಇದೆ ಎಂಬ ಕಾರಣದಿಂದ ಸಹಕಾರಿಯ ಚಟುವಟಿಕೆಗಳು ಈ ಅಧಿನಿಯಮದ, ನಿಯಮಗಳ ಅಥವಾ ಉಪವಿಧಿಗಳಿಗೆ ಅನುಸಾರವಾಗಿ ನಡೆಸಲಾಗದಿದ್ದಲ್ಲಿ ಅಥವಾ 25ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿಯ ಯಾವುದೇ ಅನರ್ಹತೆ ಉಂಟಾದಲ್ಲಿ ಅಥವಾ ಎಲ್ಲಾ ನಿರ್ದೇಶಕರು ರಾಜೀನಾಮೆ ಕೊಟ್ಟಲ್ಲಿ, ಅಂಥ ಸಹಕಾರಿಗೆ ಸಂಯುಕ್ತ ಸಹಕಾರಿಯು ಆರು ತಿಂಗಳಿಗೆ ಮೀರದ ಅವಧಿಗೆ ವಿಶೇಷಾಧಿಕಾರಿಯನ್ನು ನೇಮಕ ಮಾಡಬಹುದು.

**xx** **xx** **xx**

**39. ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಕಳುಹಿಸಬಹುದಾದ ವಿವಾದಗಳು.**- (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸಹಕಾರಿ ಅಥವಾ ಸಂಯುಕ್ತ ಸಹಕಾರಿಯ ರಚನೆ, ವ್ಯವಸ್ಥಾಪನೆ ಅಥವಾ ವ್ಯವಹಾರಗಳಿಗೆ ಸಂಬಂಧಿಸಿದಂತೆ,-

**xx** **xx** **xx**

-ಸಹಕಾರಿಯ ಆಡಳಿತ ಮಂಡಲಿಯ ಮತ್ತು ಪದಾಧಿಕಾರಿಗಳ ಚುನಾವಣೆಗೆ ಸಂಬಂಧಪಟ್ಟ ವಿವಾದವನ್ನು ಹೊರತುಪಡಿಸಿ, ಯಾವುದೇ ವಿವಾದ ಉಂಟಾದರೆ, ಅಂಥ ವಿವಾದವನ್ನು ತೀರ್ಮಾನಕ್ಕಾಗಿ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು.

**xx** **xx** **xx**

(4) ಆಡಳಿತ ಮಂಡಲಿಯ ಸದಸ್ಯರ ಚುನಾವಣೆಗೆ ಹಾಗೂ ಅಧ್ಯಕ್ಷ, ಉಪಾಧ್ಯಕ್ಷ, ಸಭಾಪತಿ, ಉಪಸಭಾಪತಿ ಅಥವಾ ಯಾವುದೇ ಇತರ ಪದಾಧಿಕಾರಿಯ ಚುನಾವಣೆಗೆ ಸಂಬಂಧಪಟ್ಟ ಎಲ್ಲಾ ಚುನಾವಣಾ ತಕರಾರು ವ್ಯಾಜ್ಯಗಳನ್ನು ಕಾರ್ಯವ್ಯಾಪ್ತಿಯ ಸಿವಿಲ್ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು:

(5)ಸಹಕಾರ ಚುನಾವಣಾ ಆಯೋಗದ ರಚನೆಯ ದಿನಾಂಕಕ್ಕೆ ರಿಜಿಸ್ಟ್ರಾರನ ಬಳಿ ಬಾಕಿಯಿರುವ ಎಲ್ಲಾ ಚುನಾವಣಾ ವ್ಯಾಜ್ಯಗಳನ್ನು, ಈ ತಿದ್ದುಪಡಿಯನ್ನು ಮಾಡದಿದ್ದರೆ ಹೇಗೋ ಹಾಗೆ ರಿಜಿಸ್ಟ್ರಾರನೇ ಇತ್ಯರ್ಥಪಡಿಸತಕ್ಕದ್ದು."

**xx** **xx** **xx**

46. **ಅಪೀಲು.**- 41ನೇ ಪ್ರಕರಣದಡಿಯಲ್ಲಿನ ತೀರ್ಮಾನದ ಅಥವಾ ಐತೀರ್ಪಿನ ವಿರುದ್ಧದ ಅಥವಾ 37ಎ ಪ್ರಕರಣದ ಅಡಿಯಲ್ಲಿನ ಅಧಿಭಾರ ಆದೇಶದ ವಿರುದ್ಧದ ಅಪೀಲನ್ನು, ಆ ತೀರ್ಮಾನದ ಅಥವಾ ಐತೀರ್ಪಿನ ಅಥವಾ ಆದೇಶದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ, ಕರ್ನಾಟಕ ಅಪೀಲು ನ್ಯಾಯಾಧಿಕರಣ ಅಧಿನಿಯಮ 1976 (1976ರ ಕರ್ನಾಟಕ ಅಧಿನಿಯಮ ಸಂಖ್ಯೆ 10)ರ ಅಡಿಯಲ್ಲಿ ರಚಿಸಲಾದ ಕರ್ನಾಟಕ ಅಪೀಲು ನ್ಯಾಯಾಧಿಕರಣಕ್ಕೆ ಸಲ್ಲಿಸತಕ್ಕದ್ದು.

**xx** **xx** **xx**

53. **ಸಂಯುಕ್ತ ಸಹಕಾರಿಯ ರಚನೆ, ಪ್ರಕಾರ್ಯಗಳು ಹಾಗೂ ನಿರ್ವಹಣೆ.**-

**xx** **xx** **xx**

(9) ಸದಸ್ಯ ಸಹಕಾರಿಯ ಅಧ್ಯಕ್ಷ ಅಥವಾ ಸಭಾಪತಿಯು ಸಂಯುಕ್ತ ಸಹಕಾರಿಯ ಸಾಮಾನ್ಯ ನಿಕಾಯದ ಪ್ರತಿನಿಧಿಯಾಗಿರತಕ್ಕದ್ದು. ಯಾವುದೇ ಕಾರಣಕ್ಕಾಗಿ ಸಭಾಪತಿ ಅಥವಾ ಅಧ್ಯಕ್ಷನು ಪ್ರತಿನಿಧಿಸಲು ಅಸಮರ್ಥನಾದರೆ, ಆತನು ಮಂಡಲಿಯ ಯಾರೇ ನಿರ್ದೇಶಕನನ್ನು ಪ್ರತಿನಿಧಿಯಾಗಿರಲು ನಾಮನಿರ್ದೇಶಿಸಬಹುದು. ಆ ಪ್ರತಿನಿಧಿಯು, ಸದಸ್ಯ ಸಹಕಾರಿಯ ಪದದಲ್ಲಿರುವವರೆಗೂ ಸಂಯುಕ್ತ ಸಹಕಾರಿಯಲ್ಲಿ ಸಹಕಾರಿಯನ್ನು ಪ್ರತಿನಿಧಿಸುವುದು ಮುಂದುವರಿಯತಕ್ಕದ್ದು.

**xx** **xx** **xx**

55. **ಚುನಾಯಿತನಾಗಲು ಅಥವಾ ನಿರ್ದೇಶಕನಾಗಿ ಮುಂದುವರಿಯಲು ಅನರ್ಹತೆ.**-

**xx** **xx** **xx**

(4) ಸಂಯುಕ್ತ ಸಹಕಾರಿಯ ಆಡಳಿತ ಮಂಡಲಿಯ ನಿರ್ದೇಶಕರು (2) ನೇ ಉಪಪ್ರಕರಣದ ಖಂಡ (ಎ), (ಬಿ), (ಸಿ), (ಡಿ) ಮತ್ತು (ಇ) ರಲ್ಲಿನ ಯಾವುದೇ ಅನರ್ಹತೆಗೆ ಒಳಗಾದಾಗ, 30ನೇ ಪ್ರಕರಣದ (6) ಮತ್ತು (7) ನೇ ಉಪಪ್ರಕರಣಗಳ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ, ಸಂಯುಕ್ತ ಸಹಕಾರಿಗೆ ಅನ್ವಯವಾಗತಕ್ಕದ್ದು.

**XX** **XX** **XX**

**64. ಲೆಕ್ಕ ಪರಿಶೋಧನೆ.–** (1) ಸಂಯುಕ್ತ ಸಹಕಾರಿಯು ತನ್ನ ಲೆಕ್ಕಪತ್ರಗಳನ್ನು ಪ್ರತಿ ವರ್ಷದಲ್ಲಿ ಕೊನೇ ಪಕ್ಷ ಒಮ್ಮೆಯಾದರೂ ಲೆಕ್ಕಪರಿಶೋಧನಾ ನಿರ್ದೇಶಕನು ಅನುಮೋದಿಸಿದ ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧಿಸುವ ಸಂಸ್ಥೆಗಳ ಪಟ್ಟಿಯಲ್ಲಿರುವ ಹಾಗೂ ಅದರ ಸಾಮಾನ್ಯ ಸದಸ್ಯರ ಸಭೆಯಿಂದ ನೇಮಕವಾದ ಲೆಕ್ಕಪರಿಶೋಧಕರಿಂದ ಅಥವಾ ಲೆಕ್ಕಪರಿಶೋಧಿಸುವ ಸಂಸ್ಥೆಯಿಂದ ಪ್ರತಿ ವರ್ಷ ಸೆಪ್ಟಂಬರ್ ಒಂದರೊಳಗಾಗಿ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(2) ಒಂದು ಸಹಕಾರಿಯ ಲೆಕ್ಕಪರಿಶೋಧನೆಗೆ ಸಂಬಂಧಪಟ್ಟ ಪ್ರಕರಣ 33ರ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಸಂಯುಕ್ತ ಸಹಕಾರಿಗೆ ಅನ್ವಯವಾಗತಕ್ಕದ್ದು.

**XX** **XX** **XX**

## KARNATAKA LEGISLATIVE ASSEMBLY

### FOURTEENTH LEGISLATIVE ASSEMBLY

### FOURTH SESSION

## THE KARNATAKA SOUHARDA SAHAKARI (AMENDMENT) BILL, 2014

### (L.A. Bill No. 52 of 2014)

A Bill further to amend the Karnataka Souharda Sahakari Act, 1997.

Whereas it is expedient further to amend the Karnataka Souharda Sahakari Act, 1997 (Karnataka Act No 17 of 2000) for the purposes herein after appearing;

Be it enacted by the Karnataka State Legislature in the sixty-fifth year of the Republic of India as follows:-

**1. Short title and commencement**:- (1) This Act may be called the Karnataka Souharda Sahakari (Amendment) Act, 2014 .

(2) It shall come into force at once.

**2. Amendment of section 2.-** In the Karnataka Souharda Sahakari Act, 1997 (Karnataka Act No 17 of 2000) (hereinafter referred to as the principal Act), for clause (a2), the following shall be substituted, namely:-

"(a2) "Backward Classes" means such classes of citizens as may be classified as category "A" and "B' and notified by the Government from time to time for the purpose of reservation in the board Co-operative"

**3. Amendment of section 4.-** In section 4 of the principal Act, in sub-section (2), after words "they may be", the following shall be inserted, namely:-

"to avoid unhealthy competition among different types of Co-operatives, Registrar may issue direction and circulars from to time, subject to these circular and direction."

**4. Amendment of section 11.-** In section 11 of the principal Act,-

(i) in sub-section (2), the following shall be inserted at the end, namely:-

"or by person. If there is delay in submission of proposal, the Registrar, may condone the delay if satisfied with justifiable reasons for the delay and consider the amendment proposal".

(ii) in sub-section (3), after clause (c), the following shall be inserted, namely:-

"(d) a treasury Challan or Demand Draft in favour of the Registrar for having remitted the fee as prescribed."

**5. Substitution of section 17**.- For section 17 of the principal Act, the following shall be substituted, namely:-

**"17. Mobilisation of Funds.-** A Co-operative may mobilise funds in the form of share capital, deposits, debentures, loans and other contributions from its members.

Provided that a Co-operative shall not be eligible to receive any loan, subsidy, grant or financial aid in any form from the Government or any guarantee by the Government.

Provided further that nothing contained in the first provision shall apply to a Co-operative Bank."

**6. Amendment of section 20.-** In section 20 of the principal Act, in sub-section (1), in clause (b), after the words "competition", the words "or if he is a member of another Co-operative having same objectives" shall be inserted.

**7. Insertion of new sections 20A and 20B.-** After section 20 of the principal Act, the following shall be inserted, namely:-

"**20A. Acceptance or refusal of membership**.- Whenever any person seeking membership of a Co-operative applies for the membership with requisite fee and share amount as prescribed in the bye-law of that Co-operative, the board of that Co-operative shall either grant membership for that person or refuse with reasons within sixty days from the date of receipt of application for membership. If no communication of admission as a member is received by the applicant before the expiry of the said period, his application for admission shall be deemed to have been accepted by the cooperative on the last day of the said period. If the applicant is refused membership, he can appeal to the Registrar against such refusal within thirty days from the date of refusal. The Registrar shall decide on such appeal and issue orders which the Co-operative has to implement within fifteen days from the date of order.

**20B. Right of members to vote.-** Members who are admitted as members atleast one year before the date of General meeting or election as the case may be, only will have the right to vote in general meeting or in an election of the members of the board of a Co-operative. provided, this restriction shall not apply to member of a Co-operative participating in the first general meeting or first election of such Co-operative held immediately after its registration".

**8. Amendment of section 21A.-** In section 21A of the principal Act, in sub-section (1), the second proviso shall be omitted.

**9. Insertion of new section 21B.-** After section 21A of the principal Act, the following shall be inserted, namely:-

"**21B- Associate membership**.- (1) A Co-operative may admit,-

(a) any individual; or

(b) any firm, company, Co-operative society or any body or corporation constituted by or under any law for the time being inforce

- as an associate member for a specific purpose as specified in its byelaws;

Provided that no Co-operative shall have as its associate members more than ten percent of total members. In case if a Co-operative already has associate members more than ten percent of its total membership, the excess associate members shall be either converted as member of Co-operative or removed from membership of Co-operative within six months from the date of coming in to force of the Karnataka Souhardha Sahakari (Amendment) Act, 2014.

(2) An associate members can have shares of Co-operative but is not eligible to be an office-bearer of Co-operative. An associate member cannot take part in the management of Co-operative and cannot vote in any meetings or election of the co-operative.

(3) Save as provided in this section an associate member shall have all the rights and duties of a member as specified in the byelaws of a co-operative.

**10. Substitution of section 22:-** For section 22 of the principal Act, the following shall be substituted, namely:-

"**22. Restriction on collection of deposits from non-members**.- No cooperative except those have obtained license from Reserve Bank of India to do banking business, can collect deposits either from any non-members or nominal members".

**11. Amendment of section 23.-** In section 23 of the principal Act, in sub-section (3), clause (k-4) shall be omitted.

**12. Amendment of section 23A**:- In section 23A of the principal Act, the following proviso shall be inserted at the end, namely:-

"Provided, in case of urban Co-operative Banks, to open a branch where Reserve Bank of India granted permission in such case permission of the souharda federal is not required."

**13. Amendment of section 23B.**- In section 23B of the principal Act, the following shall be inserted at the end, namely:-

"the newly registered Co-operatives may make provision for representative general body in their bye-laws".

**14. Amendment of section 24.-** In section 24 of the principal Act,-

(i) after the words "exceeding the number of ", the word "elected " shall be inserted;

(ii) in sub-section (1), in fourth proviso, after the words, "Functional director", the words "if necessary" shall be inserted.

(iii) for sub-section (2), the following shall be substituted, namely:-

"(2) Save as otherwise in the Act, the term of the directors will be five years from the date of election.

